CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮೇ ೬, ೨೦೦೪ (ವೈಶಾಖ ೧೬, ಶಕ ವರ್ಷ ೧೯೨೬) | ಸಂಚಿಕೆ ೧೯ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು-03

ಟೆಂಡರ್-ಕಂ-ಹರಾಜು ಪ್ರಕಟಣೆ

ಸಂಖ್ಯೆ:ಎ2(ಎ).ಬಿಯುಡಿ.ಸಿಆರ್- 8962/03-04, ದಿನಾಂಕ: 15ನೇ ಏಪ್ರಿಲ್ 2004

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ರಸ್ತೆಯ ಕುಂದಲಹಳ್ಳಿ ಕ್ರಾಸ್‌ನಿಂದ ವೈಟ್‌ಫೀಲ್ಡ್ ಮಾರ್ಗವಾಗಿ ಶ್ರೀ ಸತ್ಯಸಾಯಿಬಾಬಾ ಆಶ್ರಮದ ಹತ್ತಿರ ರೈಲ್ವೆ ಮೇಲು ಸೇತುವೆವರೆಗಿನ ರಸ್ತೆಯನ್ನು ಅಭಿವೃದ್ಧಿ ಪಡಿಸುವ ಕಾಮಗಾರಿಗೆ ಅಡ್ಡಬರುವ ಮರಗಳನ್ನು ಕಡಿದು ತೆಗೆಯಲು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇ ಮಾಡಲು ತೀರ್ಮಾನಿಸಲಾಗಿದ್ದು ಈ ಕೆಳಕಾಣಿಸಿದ ಅನುಸೂಚಿಯ ದಿನಾಂಕದಂದು ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರಿಂದ ಟೆಂಡರ್-ಕಂ-ಬಹಿರಂಗ ಹರಾಜು ಮಾಡಲಾಗುವುದು.

| ಕ್ರ. ಸಂ. | ಟೆಂಡರ್-ಕಂ-ಹರಾಜು ನಡೆಯುವ ಸ್ಥಳ | ಲಾಟ್ ನಂ. | ಟೆಂಡರ್-ಕಂ-ಹರಾಜಿನ ದಿನಾಂಕ ಟೆಂಡರ್ ಸ್ವೀಕರಿಸುವ ಮತ್ತು ಟೆಂಡರ್ ಕಂ ಹರಾಜಿನ ವೇಳೆ | ಪ್ರಸ್ತುತ ಮರ ಇರುವ ಸ್ಥಳ | ಮಾರಾಟಕ್ಕೆ ಇಡಲಾಗಿರುವ ಮರದ ಜಾತಿಯ ವಿವರ ಹಾಗೂ ಮರಗಳ ಸಂಖ್ಯೆ | ಹರಾಜಿಗೆ ಪ್ರಸ್ತಾಪಿಸಿದ ದೊರೆಯಬಹುದಾದ ಸೌದೆ/ ಟಿಂಬರ್ ಅಂದಾಜು ಟನ್‌ಗಳಲ್ಲಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಅರಣ್ಯ ಭವನ 18ನೇ ಕ್ರಾಸ್, ಮಲ್ಲೇಶ್ವರಂ ಬೆಂಗಳೂರು | | ದಿನಾಂಕ: 10.5.04 ರಂದು ಮದ್ಯಾಹ್ನ 3.00 ಗಂಟೆಗೆ ಟೆಂಡರ್ ಸ್ವೀಕರಿಸಲಾಗುವುದು. ನಂತರ 4.30 ರಿಂದ ಹರಾಜು ನಡೆಸಲಾಗುವುದು | ಬೆಂಗಳೂರು ವರ್ತೂರು ರಸ್ತೆ ಕುಂದಲಹಳ್ಳಿ ಕ್ರಾಸ್‌ನಿಂದ ಕಿ.ಮೀ. 15.20 ರಿಂದ 16.20 ರವರೆಗೆ | ರೈನ್ ಟ್ರೀ, ಅಂಟುವಾಳ ಹೊಂಗೆ ನೇರಳೆ ಗುಲ್‌ಮೊಹರ್ ಚೆರ್ರಿ ಸಿಸ್ಸು, ಅಕೇಶಿಯಾ, ಬಸವನಪಾದ ಜಾಲಿ ಸಿಲೇಟ ಇತ್ಯಾದಿಮರಗಳ ಸಂಖ್ಯೆ: 55 ಎಡ ಬದಿ – 24 ಬಲ ಬದಿ – 31 | ಸೌದೆ 12.43 ಟನ್ ಟಿಂಬರ್ – 3-55 ಘ. ಮೀ. |
| 2 | | | | ಬೆಂಗಳೂರು ವರ್ತೂರು ರಸ್ತೆ ಕುಂದಲಹಳ್ಳಿ ಕ್ರಾಸ್‌ನಿಂದ ಕಿ.ಮೀ. 16.20 ರಿಂದ 17.20 ರವರೆಗೆ | ಹುಣಸೆ, ಹೊಂಗೆ, ರೈನ್‌ಟ್ರೀ, ಆಲ, ಅತ್ತಿಸ್ಪೈಥೋಡಿಯಾ, ಸಿಸ್ಸು, ಚೆರ್ರಿ, ಆರಳಿ, ಇತರೆ ಜಾತಿ ಮರಗಳ ಸಂಖ್ಯೆ 32 ಎಡ ಬದಿ – 10 ಬಲ ಬದಿ – 22 | ಟಿಂಬರ್– 7.53 ಸೌದೆ - 11.56 ಟನ್ |

| 1 | 2 | 3 | 4 | 5 | 6 | 7 |
|---|---|---|---|---|---|---|
| 3 | | | | ಬೆಂಗಳೂರು ವರ್ತೂರು ರಸ್ತೆ ಕುಂದಲಹಳ್ಳಿ ಕ್ರಾಸ್‌ನಿಂದ ಕಿ.ಮೀ. 17.20 ರಿಂದ 18.32 ರವರೆಗೆ | ರೈನ್ ಟ್ರೀ ಗುಲ್‌ಮೊಹರ್, ತಪಸ್ಸೀ, ಆಲ ಅರಳಿ, ಇತರೆ ಜಾತಿ ಮರಗಳ ಸಂಖ್ಯೆ 15 ಎಡ ಬದಿ – 5 ಬಲ ಬದಿ – 10 | ಸೌದೆ 23.01 ಟನ್ ಟಿಂಬರ್ – 3-96 ಘ. ಮೀ. |
| 4 | | | | ಬೆಂಗಳೂರು ವೈಟ್‌ಫೀಲ್ಡ್ ರೇಲು ಮೇಲು ಸೇತುವೆ ಯಿಂದ ವರ್ತೂರು ಕೋಡಿ ಕಡೆಗೆ ಕಿ.ಮೀ. 6.50 ರಿಂದ ಕಿ.ಮೀ.7.50 ರವರೆಗೆ | ಹಿಪ್ಪೆ ಆಲ, ಫೆಲ್ಟೋಫಾರಂ, ಮಾವು, ಹೊಂಗೆ, ನೇರಳೆ, ಸ್ಪೆಥೋಡಿಯಾ, ಹುಣಸೆ, ಶಿಸ್ಸು, ಇತ್ಯಾದಿ ಮರಗಳ ಸಂಖ್ಯೆ 47 ಎಡ ಬದಿ – 11 ಬಲ ಬದಿ – 36 | ಸೌದೆ 10.86 ಟನ್ ಟಿಂಬರ್ – 0-86 ಘ. ಮೀ. |
| 5 | | | | ಬೆಂಗಳೂರು ವೈಟ್‌ಫೀಲ್ಡ್ ರೇಲು ಮೇಲು ಸೇತುವೆ ಯಿಂದ ವರ್ತೂರು ಕೋಡಿ ಕಡೆಗೆ ಕಿ.ಮೀ. 7.50 ರಿಂದ ಕಿ.ಮೀ. 8.50 ರವರೆಗೆ | ಗುಲ್‌ಮೊಹರ್ ಎಲಚಿ, ಆಲ, ಫೆಲ್ಟೋಫಾರಂ, ಮಾವು, ಹೊಂಗೆ, ನೇರಳೆ, ಜಕರಾಂಡ ಸ್ಪೆಥೋಡಿಯಾ, ತಂಗಡಿ ಹುಣಸೆ, ಶಿಸ್ಸು, ಹೂರ್ವಸಿ, ಹಾಲೆ ಇತ್ಯಾದಿ ಮರಗಳ ಸಂಖ್ಯೆ 84 ಎಡ ಬದಿ – 14 ಬಲ ಬದಿ – 70 | ಸೌದೆ 2.76 ಟನ್ ಟಿಂಬರ್ – 3-08 ಘ. ಮೀ. |
| 6 | | | | ಬೆಂಗಳೂರು ವೈಟ್‌ಫೀಲ್ಡ್ ರೇಲು ಮೇಲು ಸೇತುವೆ ಯಿಂದ ವರ್ತೂರು ಕೋಡಿ ಕಡೆಗೆ ಕಿ.ಮೀ. 8.50 ರಿಂದ ಕಿ.ಮೀ. 9.50 ರವರೆಗೆ | ಹೊಂಗೆ, ಬೇವು ಜಕರಾಂಡ ಸ್ಪೆಥೋಡಿಯಾ, ಬಸವನಪಾದ ತಂಗಡಿ ಹುಣಸೆ, ಗೋಣಿ ಇತ್ಯಾದಿ ಮರಗಳ ಸಂಖ್ಯೆ 24 ಎಡ ಬದಿ – 11 ಬಲ ಬದಿ – 13 | ಸೌದೆ 4.44 ಟನ್ ಟಿಂಬರ್ – |
| 7 | | | | ಬೆಂಗಳೂರು ವೈಟ್‌ಫೀಲ್ಡ್ ರೇಲು ಮೇಲು ಸೇತುವೆ ಯಿಂದ ವರ್ತೂರು ಕೋಡಿ ಕಡೆಗೆ ಕಿ.ಮೀ. 9.50 ರಿಂದ ಕಿ.ಮೀ. 11.15 ರವರೆಗೆ | ಹೊಂಗೆ, ನೇರಳೆ, ತಂಗಡಿ, ಆಲ, ಫೆಲ್ಟೋಫಾರಂ, ಹಿಪ್ಪೆ ಇತ್ಯಾದಿ ಮರಗಳ ಸಂಖ್ಯೆ 25 ಎಡ ಬದಿ – 5 ಬಲ ಬದಿ – 20 | ಸೌದೆ 11.30 ಟನ್ ಟಿಂಬರ್ – 4-44 ಘ. ಮೀ. |

ಷರತ್ತುಗಳು

1. ಮೇಲ್ಕಾಣಿಸಿದ ಮರಗಳ ಪ್ರಮಾಣವು ಅಂದಾಜಿನ ಮೇಲೆ ನಿರ್ಧರಿಸಲಾಗಿದೆ.
2. ಈ ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬರೂ ಪ್ರತಿ ಲಾಟ್‌ಗೆ ಟೆಂಡರ್ ಕಂ-ಹರಾಜಿನಲ್ಲಿ ಭಾಗವಹಿಸಲು ರೂ.5000/- ಗಳನ್ನು ನಗದು ರೂಪದಲ್ಲಿ ಅಥವಾ ಡಿ.ಡಿ. ರೂಪದಲ್ಲಿ ಮುಂಗಡ ಠೇವಣಿಯನ್ನು ಹರಾಜಿಗೆ ಮುನ್ನಾ ನೀಡತಕ್ಕದ್ದು.
3. ರೂ. 200/- ಮತ್ತು ಇತರೆ ತೆರಿಗೆಗಳನ್ನು ಸಂದಾಯ ಮಾಡಿ ದಿನಾಂಕಃ 10.05.2004ರ ಮಧ್ಯಾಹ್ನ 1.00 ಗಂಟೆಯವರೆಗೆ ಈ ಕಛೇರಿಯಲ್ಲಿ ಟೆಂಡರ್ ಫಾರಂ ಪಡೆಯಬಹುದು. ಭರ್ತಿ ಮಾಡಿದ ಫಾರಂ ಮೇಲೆ ರೂ. 2.00 ಕೋರ್ಟ್ ಫೀ ಸ್ಟ್ಯಾಂಪ್‌ನ್ನು ಅಂಟಿಸತಕ್ಕದ್ದು, ಹಾಗೆಯೇ ಟೆಂಡರ್ ಫಾರಂ ಜೊತೆ 5000/- ಮೊಬಲಗಿನ ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಡಿ.ಡಿ.ಯನ್ನು ಪ್ರತಿ ಲಾಟ್‌ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ಹೆಸರಿನಲ್ಲಿ ಪಡೆದು ಇ.ಎಂ.ಡಿ. ಯಾಗಿ ಲಗತ್ತಿಸತಕ್ಕದ್ದು.
4. ಈ ಟೆಂಡರ್ ಕಂ ಹರಾಜನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪಡೆದಿರುತ್ತಾರೆ.

5.(ಅ) ಒಪ್ಪಿಕೊಳ್ಳಲಾದ ಟೆಂಡರ್ ಕಂ ಹರಾಜಿನ ½ ಭಾಗ ಹಣವನ್ನು ಪೂರ್ಣವಾಗಿ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳೊಂದಿಗೆ ಸ್ಥಳದಲ್ಲಿ ಹರಾಜಿನ ದಿನದಂದೇ ಪಾವತಿ ಮಾಡಬೇಕು. ಇನ್ನು ಮಿಕ್ಕ ½ ಭಾಗ ಹಣವನ್ನು ಮರಗಳ ಕಟಾವಣೆ ಹಾಗೂ ಸಾಗಾಣಿಕೆಗೆ ಮಂಜೂರಾತಿ ನೀಡುವ ದಿನ ಅಥವಾ 15 ದಿನಗಳ ಅವಧಿಯ ಮುಂಚಿತವಾಗಿ ಪಾವತಿಸಬೇಕು. ಇಲ್ಲದಿದ್ದಲ್ಲಿ ಅವರ ಇಎಂಡಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆಯಲ್ಲದೆ ಸದರಿ ಬ್ಲಾಕಿನ ಮರಗಳನ್ನು ಅವರ ಜವಾಬ್ದಾರಿಯಲ್ಲಿ ಮರು ಟೆಂಡರ್ ಕಂ ಹರಾಜು ಮಾಡಲಾಗುವುದು.

5.(ಆ) ಹಾಲಿ ಚಾಲ್ತಿಯಲ್ಲಿರುವ ತೆರಿಗೆ ವಿವರ ಮಾರಾಟವಾದ ಮೊತ್ತದ ಮೇಲೆ ಶೇ.8 ರಂತೆ ಅರಣ್ಯ ಅಭಿವೃದ್ಧಿ ತೆರಿಗೆಯನ್ನು ಸೇರಿಸಿ ಬಂದ ಮೊತ್ತಕ್ಕೆ ಈ ಕೆಳಕಂಡ ತೆರಿಗೆಗಳನ್ನು ಪಾವತಿಸಬೇಕಾಗುತ್ತದೆ.

| | | | |
|---|---|---|---|
| i. | ಮಾರಾಟ ತೆರಿಗೆ | - | 13% |
| ii. | ಮಾರಾಟ ತೆರಿಗೆ ಮೇಲೆ ಸರ್ಚ್ ಚಾರ್ಜ್ | - | 15% |
| | ಮೇಲಿನ ಎಲ್ಲಾ ಮೊತ್ತಕ್ಕೆ | - | |
| iii. | ಆದಾಯ ತೆರಿಗೆ | - | 15% |
| iv. | ಆದಾಯ ತೆರಿಗೆ ಮೇಲೆ ಸರ್ಚ್ ಚಾರ್ಜ್ | - | 5% |

ಈ ಮೇಲ್ಕಂಡ ತೆರಿಗೆಗಳು ಹಾಲಿ ಚಾಲ್ತಿಯಲ್ಲಿದ್ದು ಬದಲಾವಣೆಯಾದಲ್ಲಿ ಆಗಿನ ದರಗಳಲ್ಲಿ ತೆರಿಗೆಗಳನ್ನು ವಸೂಲಿ ಮಾಡಲಾಗುವುದು.

6. ಈ ಕ್ರಮದಿಂದ ಇಲಾಖೆಗೆ ಆಗಬಹುದಾದ ನಷ್ಟವನ್ನು ಮೂಲತಃ ವಿಜೇತ ಟೆಂಡರ್‌ದಾರರು ಕಟ್ಟಿಕೊಡಲು ವಿಫಲರಾದರೆ ಇದರ ಮೊತ್ತವನ್ನು ಬಾಕಿ ಕಂದಾಯದ ರೂಪದಲ್ಲಿ ವಸೂಲಿ ಮಾಡಲು ಕ್ರಮ ಕೈಗೊಳ್ಳಲಾಗುವುದು.
7. ನಿಯಮದಂತೆ ಕರ್ತವ್ಯ ನಿರ್ವಹಿಸಲು ವಿಫಲರಾದ ವಿಜೇತ ಟೆಂಡರ್‌ದಾರರ ಇಡಿಗಂಟನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ಜೊತೆಗೆ ಅವರ ಆರ್ಥಿಕ ಜವಾಬ್ದಾರಿಯಲ್ಲಿ ಟೆಂಡರ್ ಕರೆಯಲಾಗುವುದು.
8. ಮೇಲ್ಕಂಡ ಟೆಂಡರ್ ಕಂ ಹರಾಜನ್ನು ಭಾಗವಹಿಸುವ ಮುನ್ನಾ ವಲಯ ಅರಣ್ಯಾಧಿಕಾರಿ, ಕೆ.ಆರ್.ಪುರಂ ರವರನ್ನು ಸಂಪರ್ಕಿಸಿ ಬೆಂಗಳೂರು ಬನ್ನೇರುಘಟ್ಟ, ಆನೇಕಲ್ ರಸ್ತೆಯ ಮರಗಳನ್ನು ನೋಡಲು ಅನುಮತಿ ಪಡೆದು ಪರಿಶೀಲಿಸಿಕೊಳ್ಳುವುದು.
9. ಬ್ಲಾಕ್ ಲಿಸ್ಟ್ ಆಗಿರುವವರು ಇನ್‌ಸಾಲ್ವೆಂಟ್ಸ್, ಡಿಫಾಲ್ಟರ್ಸ್, ಮತ್ತು ಮೈನರ್, ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವುದಕ್ಕೆ ಅರ್ಹರಾಗಿರುವುದಿಲ್ಲ.
10. ಸದರಿ ಹರಾಜಿನಲ್ಲಿ ಪಡೆದುಕೊಂಡ ಮರಗಳನ್ನು ಕಟಾವು ಮಾಡುವ ಹಾಗೂ ಸಾಗಾಣಿಕೆ ಮಾಡುವ ವೆಚ್ಚವನ್ನು ಸ್ವತಃ ಗುತ್ತಿಗೆದಾರರು ನಿರ್ವಹಿಸಿಕೊಳ್ಳತಕ್ಕದ್ದು ಹಾಗೂ ಇದರ ಸಂಬಂಧ ಯಾವುದೇ ಅಡೆತಡೆಗಳಿಗೆ ಅರಣ್ಯ ಇಲಾಖೆ ಜವಾಬ್ದಾರರಾಗಿರುವುದಿಲ್ಲ ಹಾಗೂ ಈ ಕಛೇರಿಯಿಂದ ಮರ ಕಟಾವು ಮಾಡಲು ಮಂಜೂರಾತಿ ನೀಡಿದ ದಿನಾಂಕದಿಂದ 15 ದಿನದೊಳಗೆ ಸದರಿ ಮರಗಳನ್ನು ಕಟಾವು ಮಾಡಿ ಸಾಗಾಣಿಕೆ ಮಾಡತಕ್ಕದ್ದು.
11. ಸದರಿ ಟೆಂಡರ್ ಕಂ ಹರಾಜಿನಲ್ಲಿ ಪಡೆದುಕೊಂಡ ಮರಗಳನ್ನು ಕಟಾವು ಮಾಡುವಾಗ ಸಾರಿಗೆ ಸಂಚಾರಕ್ಕೆ ಹಾಗೂ ಯಾವುದೇ ಸಾರ್ವಜನಿಕ ಆಸ್ತಿ-ಪಾಸ್ತಿಗಳಿಗೆ ಧಕ್ಕೆ ಆಗದಂತೆ ಕಡಿದು ಸಾಗಾಣಿಕೆ ಮಾಡತಕ್ಕದ್ದು ಒಂದು ವೇಳೆ ಸಾರ್ವಜನಿಕ ಆಸ್ತಿಗೆ ತೊಂದರೆಯಾದಲ್ಲಿ ಅದಕ್ಕೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ.
12. ಈ ಟೆಂಡರ್ ಕಂ ಹರಾಜಿಗೆ ಸಂಬಂಧಿಸಿದಂತೆ ಬೇಕಾದ ಇತರೆ ಮಾಹಿತಿಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.
13. ಯಾವುದೇ ತಕರಾರಿನ ಬಗ್ಗೆ ಬೆಂಗಳೂರು ನಗರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಬಹುದು ಅವರ ಆದೇಶವು ಅಧೀನಾಧಿಕಾರಿಗಳು ಹಾಗೂ ಗುತ್ತಿಗೆದಾರರ ಪಾಲನಾರ್ಹವಾದುದು.
14. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶದ ಬಗ್ಗೆ ತೃಪ್ತಿ ಇಲ್ಲವಾದರೆ ಬೆಂಗಳೂರು ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಬಹುದು. ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.
15. ಟೆಂಡರ್ ಕುರಿತಾದ ನ್ಯಾಯಿಕ ವ್ಯಾಜ್ಯದ ಸಂದರ್ಭ ಉದ್ಭವಿಸಿದಲ್ಲಿ ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ವ್ಯಾಜ್ಯ ವ್ಯಾಪ್ತಿಯ ನ್ಯಾಯಾಲಯವಾಗಿರುತ್ತದೆ.
16. ಟೆಂಡರ್ ಪ್ರಕಟಣೆ ಯಾವುದೇ ನಿಯಮವನ್ನು ಉಲ್ಲಂಘಿಸಿದಲ್ಲಿ ಮರು ಟೆಂಡರ್ ಕರೆದು ಕೆಲಸ ಮಾಡಿಸುವ ಯಾವುದೇ ಕಾರಣವನ್ನು ಕೊಡದೆ ಇಡೀ ಟೆಂಡರ್‌ನ್ನು ಮುಟ್ಟುಗೋಲು ಹಾಕಿಕೊಳ್ಳುವ ಅವಕಾಶವನ್ನು ಕಾಯ್ದಿರಿಸಿಕೊಳ್ಳಲಾಗಿದೆ.
17. ಮರ ಕಡಿತಲೆ ಆದ ನಂತರ ಸಾಗಾಣಿಕೆ ಮಾಡಿಕೊಳ್ಳುವಾಗ ಸಾಗಾಣಿಕೆಯ ರಹದಾರಿ ಪತ್ರವನ್ನು ಸಂಬಂಧಿಸಿದ ವಲಯ ಅರಣ್ಯಾಧಿಕಾರಿ, ಕೆ.ಆರ್.ಪುರಂ ವಲಯದಿಂದ ಪಡೆದುಕೊಳ್ಳತಕ್ಕದ್ದು.

ಪಿ.ಆರ್. 189 ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು

**ಕರ್ನಾಟಕ ಲೋಕ ಸೇವಾ ಆಯೋಗ**

**ಲೋಕ ಸೇವಾ ಆಯೋಗದ ಕಛೇರಿ, " ಪಾರ್ಕ್ ಹೌಸ್ ", ಬೆಂಗಳೂರು**

**ಅಧಿಸೂಚನೆ ಸಂಖ್ಯೆ ಪಿಎಸ್‌ಸಿ 12 ಆರ್‌ಟಿಬಿ 2002, ದಿನಾಂಕ : 26ನೇ ಏಪ್ರಿಲ್ 2004**

ಆಯೋಗದ ಅಧಿಸೂಚನೆ ಸಂಖ್ಯೆ ಪಿಎಸ್‌ಸಿ 1 ಆರ್‌ಟಿಬಿ 10/2001 ದಿನಾಂಕ: 28–08–2003ರಲ್ಲಿ ಔಷಧ ನಿಯಂತ್ರಣ ಇಲಾಖೆಯ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯದಲ್ಲಿನ ಫಾರ್ಮಾಸ್ಯುಟಿಕ್ಸ್ ಉಪನ್ಯಾಸಕರ 01 ಹುದ್ದೆಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ, ಆ ಹುದ್ದೆಗೆ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ ತುಂಬದೆ ಇರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001 ರಡಿಯಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಸಮಸಂಖ್ಯೆಯ ದಿನಾಂಕ 06–03–2004 ರ ಅಧಿಸೂಚನೆಯಲ್ಲಿ ಪ್ರಕಟಿಸಿ, ಆ ಆಯ್ಕೆಪಟ್ಟಿಯಿಂದ ಬಾಧಿತರಾಗುವವರು ತಮ್ಮ ಆಕ್ಷೇಪಣೆಗಳನ್ನು ಸದರಿ ಅಧಿಸೂಚನೆಯನ್ನು ಪ್ರಕಟಿಸಿದ 30 ದಿನಗಳೊಳಗಾಗಿ ಸಲ್ಲಿಸಬಹುದೆಂದು ಸೂಚಿಸಲಾಗಿತ್ತು. ಈ ಬಗ್ಗೆ ಯಾವ ಆಕ್ಷೇಪಣೆಯು ಬಂದಿರುವುದಿಲ್ಲ. ಸದರಿ ನಿಯಮಗಳ ನಿಯಮ–6 ರನ್ವಯ ಅಂತಿಮ ಆಯ್ಕೆಪಟ್ಟಿ ಈ ಕೆಳಕಂಡಂತೆ ಇರುತ್ತದೆ:–

| | | |
|---|---|---|
| ನೇಮಕಾತಿ ಪ್ರಾಧಿಕಾರ | :: | ಸರ್ಕಾರ |
| ಇಲಾಖೆಯ ಹೆಸರು | :: | ಔಷಧ ನಿಯಂತ್ರಣ ಇಲಾಖೆ. |

| ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ಮೀಸಲಾತಿ | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕಗಳು |
|---|---|---|---|
| (1) | (2) | (3) | (4) |
| ಗಣೇಶಬಾಬು ಸಿ, ಅತ್ತಿಬೆಲೆ ಮೈನ್ ರೋಡ್, ಗೋಕುಲ ಲೇಔಟ್, ಪಂಪ್ ಹೌಸ್ ರೋಡ್, ಆನೇಕಲ್ ಟೌನ್–562106. | 04–05–1973 | ಪರಿಶಿಷ್ಟ ಜಾತಿ | ಎಂ.ಫಾರ್ಮಾ 68.36% |
| ಹೆಚ್ಚುವರಿ ಪಟ್ಟಿ | | | |
| ಇಲ್ಲ | | | |

ಬಿ.ಎ. ಹರೀಶ್‌ಗೌಡ

ಪಿ.ಆರ್. 185 ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ.

**FORM I**

**Office of the Director of Health and Family Welfare Services B'lore-9**

**(RULE 9 OF KARNATAKA CHANGE OF NAME RULES & REGULATIONS)**

**NOTIFICATION**

Sri **MANJANATHA MAHADEVI DEVALI** Working as **DRIVER** in the **PRIMARY HEALTH CENTRE, HIREGUTTI, KUMTA (U.K.)** Department of **HEALTH AND FAMILY WELFARE SERVICES** is permitted to change his name to **MANJUNATHA VENKTARAMANA NAIK**

P.D. 94 Director of Health & Family Welfare Services, Bangalore-9

**ನಮೂನೆ-1**

**9ನೇ ನಿಯಮ ನೋಡಿ**

**ಅರಣ್ಯ ಸಂರಕ್ಷಣಾಧಿಕಾರಿ, ಧಾರವಾಡ ವೃತ್ತ, ಧಾರವಾಡ-580 008**

**ಅಧಿಸೂಚನೆ ದಿನಾಂಕ: 7ನೇ ಫೆಬ್ರವರಿ 2004**

ಅರಣ್ಯ ಇಲಾಖೆಯ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಾರ್ಯಾಲಯ, ಧಾರವಾಡ ವೃತ್ತ, ಧಾರವಾಡ ಇಲ್ಲಿ ಪ್ರಥಮ ದರ್ಜೆ ಸಹಾಯಕಿಯಾಗಿ ಕೆಲಸ ಮಾಡುತ್ತಿರುವ **ಶ್ರೀಮತಿ ಸುಮನಾ ಸುರೇಶ** ಇವರ ಹೆಸರನ್ನು ಶ್ರೀಮತಿ **ಸುಮನಾ ಜಯಂತ್** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ. 95 ಅರಣ್ಯ ಸಂರಕ್ಷಣಾಧಿಕಾರಿ, ಧಾರವಾಡ ವೃತ್ತ, ಧಾರವಾಡ-580 008.

**FORM I**

**Office of the Director of Health and Family Welfare Services, Bangalore-9**

**(RULE 9 OF KARNATAKA CHANGE OF NAME RULES & REGULATIONS)**

**NOTIFICATION**

Sri **R.G. SUNAGAR** Working as **FIRST DIVISION ASSISTANT** in the **PRIMARY HEALTH CENTRE, DEVARAGUDDA, HAVERI DIST** Department of **HEALTH AND FAMILY WELFARE SERVICES** is permitted to change his name to **R.G. KANAVI**

P.D. 96 Director of Health & Family Welfare Services, Karnataka, Bangalore-9

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ತಿದ್ದುಪಡಿ ಪ್ರಕಟಣೆ ಸಂಖ್ಯೆ: ಬಿ1-ಹರಾಜು-ಸಿ.ಆರ್.-1/04-05, ದಿನಾಂಕ: 19ನೇ ಏಪ್ರಿಲ್ 2004**

**ವಿಷಯ:** ಅರಣ್ಯ ಮೊಕದ್ದಮೆಗಳಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ವಾಹನಗಳ ಟೆಂಡರ್-ಕಂ-ಹರಾಜು ಕುರಿತು.

**ಉಲ್ಲೇಖ:** ಈ ಕಛೇರಿಯಿಂದ ದಿ. 24.03.2004 ರಂದು ಹೊರಡಿಸಲಾದ ಸಂಕ್ಷಿಪ್ತ ಟೆಂಡರ್-ಕಂ-ಹರಾಜು ಪ್ರಕಟಣೆ ಸಂಖ್ಯೆ : ಬಿ1-71ಎ-ಸಿ.ಆರ್-1/03-04 ದಿನಾಂಕ 24.3.2004.

ಉಲ್ಲೇಖದ ಈ ಕಛೇರಿ ಪ್ರಕಟಣೆಯಲ್ಲಿ ವಿವರಿಸಿದಂತೆ ದಿ. 28.04.04 ರಂದು ಶಂಕರ್ ಅರಣ್ಯ ವಲಯ ಕಛೇರಿ ಆವರಣದಲ್ಲಿ, ದಿ. 29.04.04 ರಂದು ಆಯನೂರು ಮತ್ತು ರಿಪ್ಪನ್ ಪೇಟೆ ಅರಣ್ಯ ವಲಯ ಕಛೇರಿ ಆವರಣದಲ್ಲಿ, ಮತ್ತು ದಿ. 30.04.04 ರಂದು ಮಂಡಗದ್ದೆ ಮತ್ತು ತೀರ್ಥಹಳ್ಳಿ ಅರಣ್ಯ ವಲಯ ಕಛೇರಿ ಆವರಣಗಳಲ್ಲಿ ನಡೆಯಬೇಕಾಗಿದ್ದ ಮುಟ್ಟುಗೋಲಾದ ವಾಹನಗಳ ಟೆಂಡರ್-ಕಂ-ಹರಾಜನ್ನು ಮುಂದೂಡಲಾಗಿದೆ. ಈ ಟೆಂಡರ್-ಕಂ-ಹರಾಜನ್ನು ಈ ಕೆಳಕಂಡ ದಿನಾಂಕಗಳಂದು ನಡೆಸಲಾಗುವುದು.

| ಕ್ರ. ಸಂ. | ಸ್ಥಳ | ದಿನಾಂಕ |
|---|---|---|
| 1 | ಶಂಕರ್ ಅರಣ್ಯ ವಲಯ ಕಛೇರಿ, ಆವರಣದಲ್ಲಿ, | 17.05.2004 ರಂದು |
| 2 | ಆಯನೂರು ಅರಣ್ಯ ವಲಯ ಕಛೇರಿ, ಆವರಣದಲ್ಲಿ, | 18.05.2004 ರಂದು |
| 3 | ರಿಪ್ಪನ್ ಪೇಟೆ ಅರಣ್ಯ ವಲಯ ಕಛೇರಿ, ಆವರಣದಲ್ಲಿ, | 18.05.2004 ರಂದು |
| 4 | ಮಂಡಗದ್ದೆ ಅರಣ್ಯ ವಲಯ ಕಛೇರಿ, ಆವರಣದಲ್ಲಿ, | 19.05.2004 ರಂದು |
| 5 | ತೀರ್ಥಹಳ್ಳಿ ಅರಣ್ಯ ವಲಯ ಕಛೇರಿ, ಆವರಣದಲ್ಲಿ, | 19.05.2004 ರಂದು |

ದಿನಾಂಕ 24.03.2004ರ ಈ ಕಛೇರಿಯ ಸಂಕ್ಷಿಪ್ತ ಪ್ರಕಟಣೆಯಲ್ಲಿ ನಮೂದಿಸಿದ ಟೆಂಡರ್ ಸ್ವೀಕರಿಸುವ ಸಮಯ, ಹರಾಜಿನ ಸಮಯ ಮತ್ತು ಟೆಂಡರ್-ಕಂ-ಹರಾಜಿನ ಷರತ್ತುಗಳಲ್ಲಿ ಯಾವುದೇ ಬದಲಾವಣೆಯಿರುವುದಿಲ್ಲ.

ಜಿ. ಜಯರಾಮಯ್ಯ

ಪಿ.ಆರ್. 186 ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ (ಲಾಲ್‌ಬಾಗ್ ಸಸ್ಯತೋಟ) ಲಾಲ್‌ಬಾಗ್ ಬೆಂಗಳೂರು-4**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ತೋಉನಿ:ಲಾಸತೋ:ಬಿಜಿಟಿ:ವಿನಿ1:14:2003-04, ದಿನಾಂಕ: 26ನೇ ಏಪ್ರಿಲ್ 2004**

ಲಾಲ್‌ಬಾಗ್ ಸಸ್ಯತೋಟದಲ್ಲಿನ ಸಾರ್ವಜನಿಕ ಶೌಚಾಲಯಗಳು ಹಾಗೂ ತೋಟಗಾರಿಕೆ ಇಲಾಖೆ ಕಛೇರಿಗಳಲ್ಲಿರುವ ಶೌಚಾಲಯಗಳನ್ನು ವಾರ್ಷಿಕ ಗುತ್ತಿಗೆ ಆಧಾರದ ಮೇಲೆ ಸ್ವಚ್ಛತಾ ಕೆಲಸಗಳನ್ನು ಮಾಡಿಸಲು ದಿನಾಂಕ 1-6-2004 ರಿಂದ 31-5-2005 ರವರೆಗಿನ ಒಂದು ವರ್ಷದ ಅವಧಿಗಾಗಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಈ ಕೆಳಗೆ ಸೂಚಿಸಿರುವ ಷರತ್ತು ಹಾಗೂ ನಿಬಂಧನೆಗಳಿಗೆ ಒಪ್ಪಿದಲ್ಲಿ ದಿನಾಂಕ: 15-05-2004 ರಿಂದ 20-05-2004 ರವರೆಗೆ ಈ ಕಛೇರಿಯಿಂದ ರೂ.500-00 ದರದಲ್ಲಿ ಮಾರಾಟ ಮಾಡುವ ನಿಗದಿತ ಟೆಂಡರ್ ಫಾರಂಗಳನ್ನು ಪಡೆದು ಮೊಹರು ಮಾಡಿದ ಟೆಂಡರ್‌ಗಳನ್ನು ದಿನಾಂಕ 21-05-2004 ರಂದು ಸಂಜೆ 1-00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸುವುದು. ಟೆಂಡರ್‌ಗಳನ್ನು ಅದೇ ದಿನ ಸಂಜೆ 4-00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

**ನಿರ್ವಹಿಸಬೇಕಾದ ಗುತ್ತಿಗೆ ಕೆಲಸಗಳು:**

1. ಲಾಲ್‌ಬಾಗ್ ಸಸ್ಯತೋಟದ ಗಾಜಿನ ಮನೆ ಪಕ್ಕದಲ್ಲಿ ಒಂದು ಸಾರ್ವಜನಿಕ ಶೌಚಾಲಯವಿದ್ದು ಇದರಲ್ಲಿ ಒಟ್ಟು 19 ಶೌಚಾಲಯಗಳಿರುತ್ತದೆ. ಮುಖ್ಯದ್ವಾರದ ಪಕ್ಕದಲ್ಲಿನ ಸಾರ್ವಜನಿಕ ಶೌಚಾಲಯದಲ್ಲಿ 8 ಶೌಚಾಲಯವಿದ್ದು ಇವುಗಳನ್ನು ಪ್ರತಿದಿನ ಸ್ವಚ್ಛಗೊಳಿಸಿಕೊಂಡು ಮೂತ್ರ ವಿಸರ್ಜನೆಗೆ ಬರುವ ಪ್ರವಾಸಿಗರನ್ನು ಬಿಟ್ಟು ಮಲವಿಸರ್ಜನೆಗೆ ಬರುವ ಸಾರ್ವಜನಿಕರಿಂದ ಮಾತ್ರ ಒಬ್ಬರಿಗೆ ರೂ.1/- ಪಡೆದು ಸ್ವಚ್ಛಗೊಳಿಸಬೇಕಾಗಿರುತ್ತದೆ. ಈ ಎರಡು ಶೌಚಾಲಯಗಳಲ್ಲಿ ಒಂದೊಂದು ವಹಿಯನ್ನು ಇಟ್ಟು ಸಾರ್ವಜನಿಕರ ಸಲಹೆ ಅಥವಾ ಸೂಚನೆಗಳಿಗೆ ಅವಕಾಶ ಕಲ್ಪಿಸಬೇಕು.

2. ಲಾಲ್‌ಬಾಗ್ ಸಮುಚ್ಚಯದಲ್ಲಿ ಇರುವ ತೋಟಗಾರಿಕೆ ಇಲಾಖೆ ಕಛೇರಿಗಳಲ್ಲಿ ಸುಮಾರು 30 ಶೌಚಾಲಯಗಳಿದ್ದು ಇವುಗಳಲ್ಲಿ ಪ್ರತಿದಿನ ಕನಿಷ್ಠ 3 ಬಾರಿ ಬ್ಲೀಚಿಂಗ್ ಪೌಡರ್ ಮತ್ತು ಫಿನಾಯಿಲ್ ಬಳಸಿ ಸ್ವಚ್ಛಗೊಳಿಸಬೇಕು. ಸ್ವಚ್ಛಗೊಳಿಸಿದ ಬಗ್ಗೆ ಸಂಬಂಧಿಸಿದ ಕಛೇರಿಯಲ್ಲಿ ಒಂದು ವಹಿಯನ್ನು ಇಟ್ಟು ಅಲ್ಲಿ ಆ ಕಛೇರಿಯ ಒಬ್ಬ ನೌಕರರ ಸಮ್ಮುಖದಲ್ಲಿ ದಾಖಲು ಮಾಡಬೇಕು.

3. ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಿಂದ ಮೇಲೆ ಸೂಚಿಸಿದ ಒಂದು ಮತ್ತು ಎರಡು ವಿಭಾಗಗಳ ಶೌಚಾಲಯಗಳನ್ನು ಸ್ವಚ್ಛಗೊಳಿಸಲು ಬ್ಲೀಚಿಂಗ್ ಪೌಡರ್ ಮತ್ತು ಫಿನಾಯಿಲ್ ಹಾಗೂ ಇತರೆ ಸಲಕರಣೆಗಳನ್ನು ತಮ್ಮ ಸ್ವಂತ ಖರ್ಚಿನಿಂದ ನಿರ್ವಹಿಸಬೇಕಾಗುತ್ತದೆ ಹಾಗೂ ಈ ಎರಡು ವಿಭಾಗಗಳ ನಿರ್ವಹಣೆಗಳನ್ನು ನಿರ್ವಹಿಸಿ ಇಲಾಖೆಗೆ ಒಂದು ವರ್ಷಕ್ಕೆ ಎಷ್ಟು ಹಣವನ್ನು ಸಂದಾಯ ಮಾಡಲಾಗುತ್ತದೆ ಎಂಬುದನ್ನು ನಿಗದಿತ ಟೆಂಡರ್ ನಮೂನೆಯಲ್ಲಿ ನಮೂದಿಸಬೇಕು.

4. ವರ್ಷದಲ್ಲಿ ಜನವರಿ ಮತ್ತು ಆಗಸ್ಟ್ ಮಾಹೆಗಳಲ್ಲಿ ಎರಡು ಬಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಸಮಯದಲ್ಲಿ ಸಾರ್ವಜನಿಕ ಶೌಚಾಲಯಗಳಲ್ಲಿ ಹೆಚ್ಚುವರಿ ಸಿಬ್ಬಂದಿಯನ್ನು ನಿಯೋಜಿಸಿ ಸ್ವಚ್ಛತಾ ಕೆಲಸಗಳನ್ನು ಸಾರ್ವಜನಿಕರಿಂದ ಯಾವುದೇ ದೂರುಗಳು ಬರದಂತೆ ಸ್ವಚ್ಚತಾ ಕೆಲಸಗಳನ್ನು ಕೈಗೊಳ್ಳಬೇಕು.

**ಷರತ್ತು ಹಾಗೂ ನಿಬಂಧನೆಗಳು:**

1. ಟೆಂಡರ್ ಸಲ್ಲಿಸುವ ಸಮಯದಲ್ಲಿ ರೂ.5,000-00 ಗಳ ಮೌಲ್ಯಕ್ಕೆ ಇ.ಎಂ.ಡಿ. ಯನ್ನು ಬ್ಯಾಂಕ್ ಡ್ರಾಫ್ಟ್‌ನ್ನು ಬೆಂಗಳೂರು ಗಾರ್ಡನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿಗೆ ತೆಗೆದು ಟೆಂಡರ್ ಜೊತೆ ಲಗತ್ತಿಸಬೇಕು. ಯಶಸ್ವಿ ಟೆಂಡರ್‌ದಾರರ ಠೇವಣಿಯನ್ನು ಬಿಟ್ಟು ಉಳಿದ ಟೆಂಡರ್‌ದಾರರ ಇ.ಎಂ.ಡಿ. ಯನ್ನು ಟೆಂಡರ್ ಪರಿಶೀಲನೆ ನಂತರ ಕೆ.ಟಿ.ಪಿ.ಪಿ. ಆಕ್ಟ್ ಅನ್ವಯ ಹಿಂತಿರುಗಿಸಲಾಗುವುದು. ಅನುಮೋದಿತ ಟೆಂಡರ್‌ದಾರರ ಠೇವಣಿಯನ್ನು ಗುತ್ತಿಗೆ ಅವಧಿಯನ್ನು ಯಶಸ್ವಿಯಾಗಿ ಪೂರೈಸಿದ ನಂತರ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು.

2. ಒಂದು ಬಾರಿ ಗುತ್ತಿಗೆ ಟೆಂಡರ್ ದರವನ್ನು ನಮೂದಿಸಿದ ನಂತರ ಯಾವುದೇ ಕಾರಣಕ್ಕೂ ಕಡಿಮೆ ಮಾಡುವುದಾಗಲಿ ಅಥವಾ ಹಿಂದಕ್ಕೆ ಪಡೆಯುವುದಕ್ಕೆ ಅವಕಾಶ ಇರುವುದಿಲ್ಲ. ಹಾಗೇನಾದರೂ ಟೆಂಡರ್ ಹಿಂದಕ್ಕೆ ಪಡೆದಲ್ಲಿ ಅಥವಾ ಗುತ್ತಿಗೆ ಕೆಲಸಗಳನ್ನು ನಿರ್ವಹಿಸಲು ನಿರಾಕರಿಸಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಿಯಮಾನುಸಾರ ಕ್ರಮ ಜರುಗಿಸಲಾಗುವುದು.

3. ಟೆಂಡರ್ ಸಲ್ಲಿಸುವ ಸಮಯದಲ್ಲಿ ನಮೂದಿಸಿರುವ ಟೆಂಡರ್ ಮೊತ್ತದ ಶೇಕಡ 25 ಭಾಗದ ಹಣವನ್ನು ಬ್ಯಾಂಕ್ ಡ್ರಾಫ್ಟ್ ಮೂಲಕ ಟೆಂಡರ್ ನಮೂನೆಯೊಂದಿಗೆ ಲಗತ್ತಿಸಿರಬೇಕು. ಈ ಹಣಕ್ಕೆ ಡಾಫ್ಟ್ ಲಗತ್ತಿಸದೆ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಅತಿ ಹೆಚ್ಚು ಮೊತ್ತ ನಮೂದಿಸಿರುವ ಟೆಂಡರ್ ಅನ್ನು ನಿರ್ದೇಶಕರಿಂದ ಅನುಮೋದಿಸಿ ಉಳಿದ ಶೇಕಡ 75 ಭಾಗದ ಹಣವನ್ನು ಸಂದಾಯ ಮಾಡಲು ಸೂಚಿಸಿದ 7 ದಿನಗಳ ಒಳಗೆ ಈ ಕಛೇರಿಗೆ ಪಾವತಿ ಮಾಡಬೇಕು. ತಪ್ಪಿದಲ್ಲಿ ಠೇವಣಿ ಮೊತ್ತ ಹಾಗೂ ಟೆಂಡರ್ ಮೊತ್ತದ ಶೇಕಡ 25 ಭಾಗದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮರು ಟೆಂಡರ್ ಪ್ರಕ್ರಿಯೆ ನಡೆಸಲಾಗುವುದು.

4. ಯಶಸ್ವಿ ಟೆಂಡರ್‌ದಾರರು ಶೌಚಾಲಯ ನಿರ್ವಹಣೆ ಕೆಲಸಗಳನ್ನು ಸಮರ್ಪಕವಾಗಿ ನಿರ್ವಹಿಸುವಲ್ಲಿ ವಿಫಲರಾದಲ್ಲಿ ಅಥವಾ ಸಾರ್ವಜನಿಕರಿಂದ ದೂರುಗಳು ಬಂದಲ್ಲಿ ಮಧ್ಯದಲ್ಲಿಯೆ ಟೆಂಡರ್ ಅವಧಿಯನ್ನು ರದ್ದುಪಡಿಸಿ ಸರ್ಕಾರಕ್ಕೆ ಸಂದಾಯ ಮಾಡಿರುವ ಠೇವಣಿ ಮತ್ತು ಟೆಂಡರ್ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮುಂದಿನ ಕ್ರಮ ಜರುಗಿಸಲಾಗುವುದು.

5. ಮೇಲೆ ಸೂಚಿಸಿರುವ ಷರತ್ತು, ನಿಬಂಧನೆಗಳು ಹಾಗೂ ನಿರ್ವಹಿಸಬೇಕಾದ ಕೆಲಸಗಳಲ್ಲದೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರುರವರು ವಿಧಿಸಬಹುದಾದ ಮತ್ತು ವಹಿಸಬಹುದಾದ ಷರತ್ತು, ನಿಬಂಧನೆ ಹಾಗೂ ಸ್ವಚ್ಛತೆಗೆ ಸಂಬಂಧಿಸಿದ ಕೆಲಸಗಳನ್ನು ನಿರ್ವಹಿಸಲು ಬದ್ಧರಾಗಿರಬೇಕು.

6. ಟೆಂಡರ್‌ಗಳನ್ನು ಒಪ್ಪುವ ಅಥವಾ ಕಾರಣ ನೀಡದೆ ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರವರಲ್ಲಿ ಕಾಯ್ದಿರಿಸಲಾಗಿದೆ ಹಾಗೂ ಗುತ್ತಿಗೆ ಅವಧಿಯಲ್ಲಿ ಯಾವುದೇ ಲೋಪದೋಷಗಳು ಉದ್ಭವಿಸಿದಲ್ಲಿ ಟೆಂಡರ್ ಅವಧಿ ಮಧ್ಯದಲ್ಲಿಯೇ ರದ್ದುಪಡಿಸುವ ಹಕ್ಕನ್ನು ಸಹ, ತೋಟಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ.

7. ಯಶಸ್ವಿ ಟೆಂಡರ್‌ದಾರರು ಗುತ್ತಿಗೆ ಕೆಲಸವನ್ನು ವಹಿಸಿಕೊಳ್ಳುವ ಮೊದಲು ಮೇಲೆ ಸೂಚಿಸಿರುವ ಎಲ್ಲಾ ಷರತ್ತು ನಿಬಂಧನೆಗಳು ಹಾಗೂ ನಿರ್ವಹಿಸಬಹುದಾದ ಕೆಲಸಗಳನ್ನು ನಿರ್ವಹಿಸುವ ಹಾಗೂ ಪಾಲಿಸುವ ಕುರಿತು ರೂ.100/- ಛಾಪಾ ಕಾಗದದ ಮೇಲೆ ಮುಚ್ಚಳಿಕೆ ಪತ್ರವನ್ನು ಬರೆದು ನೋಟರಿ ರವರಿಂದ ದೃಢೀಕರಿಸಿ ತೋಟಗಾರಿಕೆ ಉಪ ನಿರ್ದೇಶಕರು, ಲಾಲ್‌ಬಾಗ್ ಸಸ್ಯತೋಟರವರಿಗೆ ನೀಡಬೇಕು.

ಪಿ.ಆರ್. 187 ತೋಟಗಾರಿಕೆ ಉಪ ನಿರ್ದೇಶಕರು ಲಾಲ್‌ಬಾಗ್ ಸಸ್ಯತೋಟ

## ಜಲಸಂಪನ್ಮೂಲ ಇಲಾಖೆ

### ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ನಂ.5 ಭದ್ರಾ ನಾಲಾ ವಿಭಾಗ, ದಾವಣಗೆರೆ ಟೆಂಡರ್ ಪ್ರಕಟಣೆ ತಿದ್ದುಪಡಿ

**ವಿಷಯ:** ಟೆಂಡರ್ ತಿದ್ದುಪಡಿ ಬಗ್ಗೆ.

**ಉಲ್ಲೇಖ:** ಈ ಕಛೇರಿಯ ಟೆಂಡರ್ ಪ್ರಕಟಣೆ ನಂ.ದಾನಾವಿ.5:ಸಃಂ:2:4373-18:2003-04: 9.3.2004.

ಮೇಲ್ಕಂಡ ವಿಷಯದ ಬಗ್ಗೆ ಉಲ್ಲೇಖದ ಪತ್ರದಡಿಯಲ್ಲಿ ಕರೆಯಲಾಗಿದ್ದ ಟೆಂಡರ್ ಅನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ. ಖಾಲಿ ಟೆಂಡರ್ ಫಾರಂ ಗುತ್ತಿಗೆದಾರರಿಗೆ ನೀಡುವ ದಿನಾಂಕ: 15.4.2004ರ ಬದಲಾಗಿ 26.04.2004 ಎಂದೂ, ಹಾಗೂ ಟೆಂಡರ್ ಫಾರಂ ಶುಲ್ಕದ ಸಮೇತ ಅರ್ಜಿ ಸಲ್ಲಿಸುವ ಕೊನೆ ದಿನಾಂಕ: 26.4.2004ರ ಬದಲಾಗಿ 15.4.2004 ಎಂದು ತಿದ್ದುಪಡಿ ಮಾಡಿ ಓದಿಕೊಳ್ಳಲು ಕೋರಿದೆ.

ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಶಿವಾನಂದ ಎಸ್. ಬಣಕಾರ್**

ಪಿ.ಆರ್. 190 ಕಾರ್ಯಪಾಲಕ ಇಂಜಿನಿಯರರು ನಂ.5, ಭದ್ರಾ ನಾಲಾ ವಿಭಾಗ, ದಾವಣಗೆರೆ.

## ಕರ್ನಾಟಕ ಅರಣ್ಯ ಇಲಾಖೆ

### ಅರಣ್ಯ ಕೃಷಿಕರು, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ, ದೊರೆಸಾನಿಪಾಳ್ಯ, ಬೆಂಗಳೂರು - 560 076

### ಟೆಂಡರ್ ಕಮ್ ಹರಾಜು ಪ್ರಕಟಣೆ

**ಸಂಖ್ಯೆ: ಎ5-ಎಸ್ಎಎಸ್-ನೀಲಗಿರಿ-ಸಿಟ್ರಿಡೋರ:ಸಿಆರ್-2-2004-05, ದಿನಾಂಕ: 13ನೇ ಏಪ್ರಿಲ್ 2004**

**ವಿಷಯ:** ನೀಲಗಿರಿ, ಸಿಟ್ರಿಡೋರ ಎಲೆಗಳು ಮುಂತಾದ ಅರಣ್ಯ ಉತ್ಪನ್ನಗಳನ್ನು ರೂಢಿಸುವ ಟೆಂಡರ್ ಹಾಗೂ ಹರಾಜು ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ತಪಶೀಲಿನಲ್ಲಿ ಸೂಚಿಸಿರುವ ನೀಲಗಿರಿ, ಸಿಟ್ರಿಡೋರ ಎಲೆಗಳನ್ನು 2004-2006ನೇ ಸಾಲಿಗೆ ದಿನಾಂಕ: 19-05-2004 ರಂದು ಕೆಳಗೆ ಸಹಿ ಮಾಡಿದವರು ಅಥವಾ ಅವರಿಂದ ಅಧಿಕೃತ ಪಡಿಸಿದವರು ಹರಾಜು ನಿಬಂಧನೆಗಳಿಗೊಳಪಟ್ಟಂತೆ ಟೆಂಡರ್ ಕಮ್ ಹರಾಜು ಮೂಲಕ ಬಹಿರಂಗವಾಗಿ ಮಾರಾಟ ಮಾಡುವರು. ದಿನಾಂಕ: 19.5.2004ರಂದು ಟೆಂಡರ್ ಕಮ್ ಹರಾಜು ನಡೆಯದಿದ್ದ ಪಕ್ಷದಲ್ಲಿ ಮತ್ತೆ ದಿನಾಂಕ:24.5.2004 ರಂದು ಟೆಂಡರ್ ಕಮ್ ಹರಾಜು ನಡೆಸಲಾಗುವುದು. ಈ ಕುರಿತು ದಿನಾಂಕ:19.04.2004 ರಂದು ಕರೆದ ಟೆಂಡರ್‌ನ ನಿಬಂಧನೆಗಳೇ ಅನ್ವಯಿಸುತ್ತದೆ. ಇಚ್ಛಿವುಳ್ಳವರು ಹರಾಜು ನಿಬಂಧನೆಗೊಳಪಟ್ಟಂತೆ ಭಾಗವಹಿಸಿ ಪಡೆಯಬಹುದು.

**ತಪಶೀಲು**

| ಕ್ರ. ಸಂ. | ಸಂಶೋಧನಾ ವಲಯದ ಹೆಸರು | ಹರಾಜು ಮಾಡುವ ಸ್ಥಳ | ಹರಾಜಿಗೆ ಪ್ರಸ್ತಾಪಿಸಿದ ಅಂಶಗಳ ವಿವರ | | ಟೆಂಡರ್ ಫಾರಂ ಜೊತೆ ಲಗತ್ತಿಸಬೇಕಾದ ಠೇವಣಿ ಹರಾಜಿನ ಹಣ |
|---|---|---|---|---|---|
| | | | ವಸ್ತುಗಳ ವಿವರ | ಅಂದಾಜು ಪರಿಮಾಣ | |
| 1 | 2 | 3 | 4 | 5 | 6 |
| 1. | ಹೊಸಕೋಟೆ | ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಬೆಂಗಳೂರು ದಿನಾಂಕ:19.5.2004ರ ಮಧ್ಯಾಹ್ನ 3.00 ಗಂಟೆಗೆ, ಹರಾಜು ಮುಗಿದ ನಂತರ 4.00 ಗಂಟೆಗೆ, ಟೆಂಡರ್ ತೆಗೆಯಲಾಗುವುದು. | 1) ನೀಲಗಿರಿ, ಸಿಟ್ರಿಡೋರ ಎಲೆಗಳನ್ನು ಮರಗಳಿಂದ ಸಂಗ್ರಹಿಸುವ ಹಕ್ಕು (ಎರಡು ವರ್ಷ ಅವಧಿಗೆ) 2004 ಮತ್ತು 2006ನೇ ಸಾಲಿಗೆ<br>1) ನಲ್ಲಾಳ್-ಸಿ<br>2) ಗೊಟ್ಟಿಪುರ | 42 ಟನ್‌ಗಳು | 1) ಟೆಂಡರ್ ಫಾರಂ ಜೊತೆ 5000 ರೂ. ಮೊಬಲಗಿನ ಯಾವುದಾದರೂ ರಾಷ್ಟ್ರೀಯ ಬ್ಯಾಂಕ್‌ನಿಂದ ಪಡೆದ ಡಿಡಿ ಲಗತ್ತಿಸಬೇಕು.<br>2) ಹರಾಜಿನಲ್ಲಿ ಭಾಗವಹಿಸುವವರು ರೂ. 5000 ನಗದು ಹಣವನ್ನು ಹರಾಜಿಗೆ ಮುಂಚಿತವಾಗಿ ಪಾವತಿಸುವುದು. |
| | | | ಒಟ್ಟು | 42 ಟನ್‌ಗಳು | |

ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು.

### ಸಾಮಾನ್ಯ ನಿಬಂಧನೆಗಳು

1. ಆಸಕ್ತಿಯುಳ್ಳವರು ಮೊದಲು ಈ ವಿಭಾಗದಲ್ಲಿ 2004-2005ನೇ ಸಾಲಿಗೆ ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿರಬೇಕು. ಅಂತಹವರು ಮಾತ್ರ ಟೆಂಡರ್ ಹಾಗೂ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
2. ಟೆಂಡರ್ ಕಮ್ ಹರಾಜಿಗೆ ಬೇಕಾದ ಹೆಚ್ಚಿನ ಮಾಹಿತಿಯನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದು.
3. ಟೆಂಡರ್ ನಮೂನೆಗಳನ್ನು ನಮೂನೆ ಒಂದಕ್ಕೆ ರೂ. 10.00 ಪ್ಲಸ್ ತೆರಿಗೆಗಳು ಒಟ್ಟು ರೂ. 12.00 ಗಳನ್ನು ಪಾವತಿಸಿ ದಿನಾಂಕ: 19.5.2004ರ 1-00 ಗಂಟೆಯೊಳಗೆ ಕಛೇರಿ ವೇಳೆಯಲ್ಲಿ ಪಡೆಯಬಹುದು.
4. ಆಸಕ್ತಿಯುಳ್ಳವರು ಹರಾಜಿನಲ್ಲಿ ಭಾಗವಹಿಸುವುದಕ್ಕೆ ಮುಂಚಿತವಾಗಿ, ಅರಣ್ಯ ಸಂಪತ್ತಿಗೆ ಯಾವುದೇ ರೀತಿಯ ಹಾನಿಯುಂಟಾಗದಂತೆ ಎಚ್ಚರ ವಹಿಸಿ ಮಾರಾಟಕ್ಕೆ ಪ್ರಸ್ತಾಪಿಸಿದ ಫಸಲು ಬಿಡುವ ನೆಡುತೋಪನ್ನು ವೀಕ್ಷಿಸಬಹುದು.
5. ಟೆಂಡರ್ ನಮೂನೆಗೆ ರೂ. 2.00 ಕೋರ್ಟ್ ಫೀ ಸ್ಟಾಂಪನ್ನು ಅಂಟಿಸಿರಬೇಕು. ಟೆಂಡರ್ ನಮೂನೆಯ ಎಲ್ಲಾ ಕಾಲಂಗಳನ್ನು ಭರ್ತಿ ಮಾಡಿರಬೇಕು. ಮೇಲೆ ನಿಗದಿಪಡಿಸಿದ ಸಂಚಿತ ಠೇವಣಿಯ ಡಿ.ಡಿ. ಯನ್ನು ಲಗತ್ತಿಸಿರಬೇಕು. ಇಲ್ಲದಿದ್ದ ಪಕ್ಷದಲ್ಲಿ ಇಂತಹ ಟೆಂಡರನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.

6. ಟೆಂಡರ್‌ನ್ನು ಮೊಹರು ಮಾಡಿದ ಲಕೋಟೆಗಳಲ್ಲಿ ತಪಶೀಲಿನಲ್ಲಿ ಸೂಚಿಸಿರುವ ದಿನಾಂಕದಂದು ಮಧ್ಯಾಹ್ನ 3.00 ಗಂಟೆಯವರೆಗೆ ಕಛೇರಿಯಲ್ಲಿಡುವ ನಿಗದಿತ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು. ಹಾಗೂ ಮೊಹರು ಮಾಡಿದ ಟೆಂಡರ್‌ನ್ನು 4.00 ಗಂಟೆಗೆ ಹರಾಜಿನಲ್ಲಿ ಭಾಗವಹಿಸಿದ್ದ ಗುತ್ತಿಗೆದಾರರ ಸಮ್ಮುಖದಲ್ಲಿ ತೆಗೆದು ಬಂದ ದರಗಳನ್ನು ಪ್ರಚಾರ ಪಡಿಸಲಾಗುವುದು.
7. ಹಿಂದಿನ ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ಭಾಗವಹಿಸಿ ವಿಜೇತರಾಗಿ ಪಡೆದ ಫಸಲಿನ ಬಾಬ್ತು ಬಾಕಿ ಹೊಂದಿದ್ದು ಸಕಾಲದಲ್ಲಿ ಕಟ್ಟದೆ ಇರುವಂತಹ ಗುತ್ತಿಗೆದಾರರನ್ನು ಕಪ್ಪು ಪಟ್ಟಿಯಲ್ಲಿರುವ ಗುತ್ತಿಗೆದಾರರನ್ನು ಟೆಂಡರ್ : ಹರಾಜಿನಲ್ಲಿ ಭಾಗವಹಿಸಲು ಅವಕಾಶ ನೀಡುವುದಿಲ್ಲ.
8. ಮಾರಾಟವನ್ನು ಅಂಗೀಕರಿಸುವುದು : ನಿರಾಕರಿಸುವುದು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಅಧಿಕಾರದಲ್ಲಿರುತ್ತದೆ.
9. ಅರಣ್ಯ ಉತ್ಪನ್ನಗಳನ್ನು ತಪಶೀಲಿನಲ್ಲಿ ಸೂಚಿಸಿದ ಸಂಶೋಧನಾ ಕೇಂದ್ರಗಳಿಂದ ಮಾತ್ರ ಸಂಗ್ರಹಿಸಿ ತೆಗೆದುಕೊಂಡು ಹೋಗಲು ನಿಯಮದಂತೆ ಅನುಮತಿ ನೀಡಲಾಗುವುದು.
10. ಹರಾಜನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರ ಅರಣ್ಯ ಕೃಷಿಕರು, ಕೇಂದ್ರ ವಲಯ ಬೆಂಗಳೂರು ರವರು ಪಡೆದಿರುತ್ತಾರೆ.
11. ವಿಜಯಿಯಾದ ಬಿಡ್ಡುದಾರರು ಕರಾರು ಮಾಡಿಕೊಳ್ಳುವ ಸಮಯದಲ್ಲಿ ಭದ್ರತಾ ಠೇವಣಿಯಾಗಿ ಎನ್.ಎಸ್.ಸಿಯನ್ನು ಅರಣ್ಯ ಕಾಯ್ದೆ ಪ್ರಕಾರ ಸಲ್ಲಿಸಬೇಕು.
12. ತಪಶೀಲಿನಲ್ಲಿ ಸೂಚಿಸಿದ ಅಂಶಗಳ ಠೇವಣಿಯನ್ನು ನಗದು ರೂಪದಲ್ಲಿ ಪಾವತಿಸಿ ಹರಾಜಿಗೆ ಮುಂಚಿತವಾಗಿ ಸಲ್ಲಿಸಬೇಕು.
13. ಸಫಲರಾದ ಬಿಡ್‌ದಾರರು ಕರಾರು ಪತ್ರ ಮಾಡಿಕೊಂಡ ನಂತರ 2ನೇ ಕನಿಷ್ಟ ದರದ ಬಿಡ್‌ದಾರರ ಸಂಚಕಾರ ಠೇವಣಿಯನ್ನು ಕೋರಿಕೆ ಮೇರೆಗೆ ಹಿಂತಿರುಗಿಸಲಾಗುವುದು.
14. ವಿಜಯಿಯಾದ ಬಿಡ್ಡುದಾರರು ಮಾರಾಟ ಮುಗಿದ ನಂತರ ಮಾರಾಟದ ಪೂರ್ಣ ಮೊತ್ತ ಮತ್ತು ಅನ್ವಯವಾಗುವ ಹಾಗೂ ಚಾಲ್ತಿಯಲ್ಲಿರುವ ಪೂರ್ತಿ ತೆರಿಗೆಗಳನ್ನು ಮಾರಾಟ ದಿನದಂದು ಪಾವತಿಸಬೇಕು.
15. ಬಹಿರಂಗ ಹರಾಜಿಗೆ ಇಟ್ಟಿರುವ ಅಂಶಗಳು ಹೆಚ್ಚಾಗಬಹುದು ಅಥವಾ ಕಡಿಮೆಯಾಗಬಹುದು. ಇದು ಇಲಾಖೆಯ ವಿವೇಚನೆಗೆ ಒಳಪಟ್ಟಿರುತ್ತದೆ.
16. ಗುತ್ತಿಗೆದಾರರು ಸೂರ್ಯೋದಯದ ನಂತರ ಹಾಗೂ ಸೂರ್ಯಾಸ್ತಮಾನಕ್ಕೆ ಮುಂಚೆ ಮಾರಾಟವಾದ ಅಂಶಗಳನ್ನು ಇಲಾಖಾ ರಹದಾರಿ ಮುಖಾಂತರ ಸಾಗಣೆ ಮಾಡತಕ್ಕದ್ದು.
17. ಮಾರಾಟ ಮಾಡಲಾದ ಸ್ವತ್ತುಗಳಲ್ಲದೆ ಇನ್ನಾವುದೇ ಸ್ವತ್ತುಗಳನ್ನು ಗುತ್ತಿಗೆದಾರರು ಮುಟ್ಟಬಾರದು.
18. ಈಗಾಗಲೇ ನೆಡುತೋಪು ನಿರ್ಮಾಣವಾಗಿದ್ದ ಸ್ಥಳಗಳಲ್ಲಿ ನೆಟ್ಟಿರುವ ಗಿಡಗಳಿಗೆ ಯಾವುದೇ ಹಾನಿಯಾಗದಂತೆ ಗುತ್ತಿಗೆದಾರರು ನೋಡಿಕೊಳ್ಳಬೇಕು. ಹಾನಿಯಾದಲ್ಲಿ ಗುತ್ತಿಗೆದಾರರು ನಷ್ಟ ಪರಿಹಾರವನ್ನು ಮತ್ತು ಅರಣ್ಯ ಕೃಷಿಕರು ವಿಧಿಸುವ ದಂಡವನ್ನು ಕಟ್ಟಬೇಕಾಗುತ್ತದೆ.

ಪಿ.ಆರ್. 191 ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು.

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83**

**ಸಂಕ್ಷಿಪ್ತ ಅಲ್ಪಾವಧಿ ಮರು ಟೆಂಡರು ಪ್ರಕಟಣೆ**

**ಸಂಖ್ಯೆ: ಎ1:-ಬಬಪಾ-ಫೀಡ್-ಸಿಆರ್-30/2003-04, ದಿನಾಂಕ: 30ನೇ ಏಪ್ರಿಲ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2004-2005ನೇ ಸಾಲಿನಲ್ಲಿ ಬನ್ನೇರುಘಟ್ಟ ಬಯಾಲಾಜಿಕಲ್ ಪಾರ್ಕಿನಲ್ಲಿರುವ ವನ್ಯಪ್ರಾಣಿಗಳಿಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವಂತೆ ಆಹಾರ ಸರಬರಾಜು ಮಾಡುವ ಕೆಲಸವನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವುದಕ್ಕೆ ಸಂಬಂಧಿಸಿದಂತೆ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನಲ್ಲಿ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಮರು ಟೆಂಡರುಗಳನ್ನು ಕರೆಯಲಾಗಿದೆ. ಟೆಂಡರು ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಗೆ ದಿನಾಂಕ:20.05.2004ರ ಮಧ್ಯಾಹ್ನ 3.00 ಘಂಟೆ ಒಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಲಾಗಿದೆ. ಅದೇ ದಿನ ಮಧ್ಯಾಹ್ನ 3.30 ಕ್ಕೆ ಟೆಂಡರುಗಳನ್ನು ತೆರೆಯಲಾಗುವುದು.

**ಷೆಡ್ಯೂಲ್**

| ಯೂನಿಟ್ ಸಂಖ್ಯೆ | ವಿವರಗಳು | ಟೆಂಡರಿಗೆ ಇಡಲಾದ ಆಹಾರ ಪದಾರ್ಥಗಳ ಅಂದಾಜು ಮೊತ್ತ | ಸಲ್ಲಿಸಬೇಕಾದ ಇ.ಎಂ.ಡಿ. ಹಣ ಲಕ್ಷ ರೂ.ಗಳಲ್ಲಿ |
|---|---|---|---|
| 5 | ಸಫಾರಿ ಮತ್ತು ಮೃಗಾಲಯಕ್ಕೆ ದನದ ಮಾಂಸ (ಬೀಫ್) ಸರಬರಾಜು ಮಾಡುವುದು. | 31.90 | 3.19 |
| 7 | ಪುನರ್‌ವಸತಿ ಕೇಂದ್ರಕ್ಕೆ ದನದ ಮಾಂಸ, ಬೀಫ್ ಸರಬರಾಜು ಮಾಡುವುದು. | 47.80 | 4.78 |
| 9 | ಬಿ.ಎಫ್.ಎಫ್. ಹುಲಿಗಳಿಗೆ ದನದ ಮಾಂಸ ಸರಬರಾಜು ಮಾಡುವುದು. | 3.80 | 0.38 |

**ಷರತ್ತುಗಳು:**

1) ಗುತ್ತಿಗೆದಾರರು ಪ್ರತಿಯೊಂದು ಯೂನಿಟ್‌ಗೆ ರೂ. 500/- ಮತ್ತು ತೆರಿಗೆಗಳ ಪ್ರತ್ಯೇಕದ ಟೆಂಡರು ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 16.05.2004 ರಿಂದ 20.05.2004 ರ ಮಧ್ಯಾಹ್ನ 12.00 ಗಂಟೆಯವರೆಗೆ ಪಡೆಯಬಹುದು.
2) ಇನ್ನು ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಪಿ.ಡಿ. 42 ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83

**ಪೊಲೀಸ್ ಅಧೀಕ್ಷಕರ ಕಛೇರಿ, ಉತ್ತರ ಕನ್ನಡ, ಕಾರವಾರ**

**ಅಧಿಸೂಚನೆ ಕ್ರ.ಲೆ.ಪ.7:ಎಮ್.ಟಿ.:ನಿ. ಬಿಡಿಭಾಗ: ಟಾಯರ್ ಟ್ಯೂಬ್-362:03-04, ದಿನಾಂಕ: 21ನೇ ಏಪ್ರಿಲ್ 2004**

**ವಿಷಯ:** ನಿರುಪಯುಕ್ತ ವಾಹನಗಳ ಬಿಡಿಭಾಗಗಳನ್ನು ಮತ್ತು ಟಾಯರು ಟ್ಯೂಬ್‌ಗಳನ್ನು ಬಹಿರಂಗ (ಟೆಂಡರ್ ಕಮ್ ಆಷನ್) ಹರಾಜು ಮೂಲಕ ಮಾರಾಟ ಮಾಡುವ ಕುರಿತು.

**ಉಲ್ಲೇಖ:** 1. ವಲಯ ಕಛೇರಿ ಆದೇಶ ಕ್ರ.ಎಂ.ಟಿ:ನಿ:112:03-04 ದಿನಾಂಕ 12-1-04.
2. ವಲಯ ಕಛೇರಿ ಆದೇಶ ಕ್ರ.ಎಂ.ಟಿ:ಸಿ:321:02-03 ದಿನಾಂಕ 7-4-04.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಉತ್ತರ ಕನ್ನಡ ಜಿಲ್ಲೆಯ ಜಿಲ್ಲಾ ಸಶಸ್ತ್ರ ಮೀಸಲುಪಡೆ, ಮೋಟಾರ್ ವಾಹನ ಸಾಗಾಣಿಕೆ ವಿಭಾಗ, ಕಾರವಾರದಲ್ಲಿಯ ಯಥಾಸ್ಥಿತಿಯಲ್ಲಿರುವ ವಾಹನಗಳ ಬಿಡಿಭಾಗಗಳು ಹಾಗೂ ಟಾಯರು ಟ್ಯೂಬುಗಳ ಟೆಂಡರ್ ವ ಸಾರ್ವಜನಿಕ ಬಹಿರಂಗ ಹರಾಜು (ಟೆಂಡರ್ ಕಮ್ ಆಕ್ಷನ್) ಮೂಲಕ ಜಿಲ್ಲಾ ಸಶಸ್ತ್ರ ಕಾಯ್ದಿಟ್ಟ ಪಡೆ, ವಾಹನ ಸಾಗಾಣಿಕೆ ವಿಭಾಗ ಕಾರವಾರದಲ್ಲಿ ದಿನಾಂಕ 2-6-2004ರಂದು ಬೆಳಿಗ್ಗೆ 11:00 ಗಂಟೆಗೆ ಸರಿಯಾಗಿ ಟೆಂಡರ್ ಕಮ್ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

| ನಿರುಪಯುಕ್ತ ಹಳೆಯವಸ್ತುಗಳು | 1-4-2000 ರಿಂದ 31-3-2001 | 1-4-2001 ರಿಂದ 31-3-2002 | ಒಟ್ಟು ಸಂಖ್ಯೆ |
|---|---|---|---|
| ಹಳೆಯ ಟಾಯರ್‌ಗಳು | 55 | 78 | 133 |
| ಹಳೆಯ ಟ್ಯೂಬುಗಳು | | | |
| ಹಳೆಯ ಬಿಡಿಭಾಗಗಳು | 407 | 341 | 748 |

**ಹರಾಜಿನ ಷರತ್ತು ಮತ್ತು ನಿಯಮಗಳು ಈ ಕೆಳಗಿನಂತೆ ಇರುತ್ತವೆ.**

1. ಮೊಹರು ಮಾಡಿದ ಟೆಂಡರು (ಸೀಲ್ಡ್‌ಕವರ್) ಲಕೋಟೆಯನ್ನು ಪೊಲೀಸ್ ಅಧೀಕ್ಷಕರು ಜಿಲ್ಲಾ ಪೊಲೀಸ್ ಕಛೇರಿ, ಕಾರವಾರ ಇವರ ವಿಳಾಸಕ್ಕೆ ಖುದ್ದಾಗಿ ಅಥವಾ ಅಂಚೆ ಮೂಲಕ ದಿ:1-6-04 ಸಾಯಂಕಾಲ 4-00 ಗಂಟೆಯ ಒಳಗೆ ತಲುಪಿಸಬೇಕು. ಆನಂತರ ಬಂದ ಟೆಂಡರನ್ನು ಪರಿಗಣಿಸಲಾಗುವುದಿಲ್ಲ. ಸದ್ರಿ ಟೆಂಡರಿನ ಮೇಲೆ ನಿರುಪಯುಕ್ತ ಬಿಡಿಭಾಗಗಳನ್ನು ಹರಾಜಿನಲ್ಲಿ ಖರೀದಿಸುವ ಬಗ್ಗೆ ಎಂದು ಬರೆದಿರಬೇಕು. ಯಾವ ವರುಷದ ಬಿಡಿಭಾಗ ಹಾಗೂ ಟಾಯರ್ ಟ್ಯೂಬ್ ಖರೀದಿಸುವುದು ಎಂದು ಟೆಂಡರನ್ನು ನಮೂದಿಸಬೇಕು ಹಾಗೂ ಪ್ರತ್ಯೇಕ ಟೆಂಡರ್ ಸಲ್ಲಿಸಬೇಕು.

2. ಟೆಂಡರ್ ಫಾರಂನಲ್ಲಿ ಅತೀ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ತಿದ್ದುಪಡಿಯಾದಲ್ಲಿ ಆ ಸ್ಥಳದಲ್ಲಿ ಟೆಂಡರ್‌ದಾರರು ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲಾ.

3. ಪ್ರತಿಯೊಬ್ಬ ಟೆಂಡರ್ ಸವಾಲುದಾರರು ಪ್ರತಿ ವರುಷದ ಬಿಡಿಭಾಗ ಹಾಗೂ ಟಾಯರ್ ಟ್ಯೂಬ್‌ಗಳಿಗೆ ರೂ. 1,000.00 (ರೂಪಾಯಿ ಒಂದು ಸಾವಿರ ಮಾತ್ರ)ಗಳನ್ನು ಡಿ.ಡಿ. ಮೂಲಕ ಎಸ್.ಪಿ. ಕಾರವಾರ ರವರ ಹೆಸರಿನಲ್ಲಿ ಖರೀದಿಸಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿಯಿಲ್ಲದೆ ಕಳುಹಿಸಲಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಡಿ.ಡಿ.ಯನ್ನು ಯಾವುದೇ ಕಾರಣಕ್ಕೂ ಕ್ರಾಸ್ ಮಾಡಬಾರದೆಂದೂ, ಹಾಗೆ ಮಾಡಿದಲ್ಲಿ ಅದನ್ನು ಅನರ್ಹವೆಂದು ಪರಿಗಣಿಸಲಾಗುವುದಾಗಿ ಈ ಮೂಲಕ ತಿಳಿಸಿದೆ.

4. ಟೆಂಡರ್‌ದಾರರು ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು.

5. ಪೂರ್ಣಗೊಳಿಸಿದ ಟೆಂಡರುಗಳನ್ನು ದಿ:1-6-04ರ ಸಂಜೆ 4:00ಗಂಟೆಯವರೆಗೆ ಮಾತ್ರ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲಾ.

6. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರನ್ನು ಪೊಲೀಸ್ ಅಧೀಕ್ಷಕರು ಸಾರ್ವಜನಿಕರ ಸಮಕ್ಷಮದಲ್ಲಿ ತೆರೆದು ಬಹಿರಂಗ ಪಡಿಸುವುದು. ಇದರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸುವರೊ ಅವರನ್ನು ಯಶಸ್ವಿ ಟೆಂಡರ್ ಸವಾಲುದಾರರೆಂದು ಪರಿಗಣಿಸಲಾಗುವುದು.

7. ಪೊಲೀಸ್ ಅಧೀಕ್ಷಕರು ಮತ್ತು ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿ ಹಣ ರೂ.1,000:00 ತುಂಬಿದ ಟೆಂಡರ್‌ದಾರರು ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.

8. ಯಶಸ್ವಿಯಾದ ಟೆಂಡರ್‌ದಾರರು ಸವಾಲುದಾರರು ಬಿಡಿಭಾಗ ಹಾಗೂ ಟಾಯರ್ ಟ್ಯೂಬ್‌ಗಳ ಒಟ್ಟು ಬೆಲೆಯ 25 ಶೇಕಡಾರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಬಿಡಿಭಾಗಗಳನ್ನು ಹಾಗೂ ಟಾಯರ್ ಟ್ಯೂಬ್‌ಗಳನ್ನು ತಮ್ಮ ಸ್ವಂತ ಖರ್ಚಿನಲ್ಲಿ 7 ದಿವಸದೊಳಗಾಗಿ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿರುವ ಠೇವಣಿ ಮತ್ತು 25 ಶೇಕಡಾರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಸದರಿ ಬಿಡಿಭಾಗಗಳನ್ನು ಹರಾಜು ಮಾಡಲಾಗುವುದು.

9. ಎಲ್ಲಾ ಹಣವನ್ನು ಜಿಲ್ಲಾ ಪೊಲೀಸ್ ಕಛೇರಿಗೆ ನಗದುರೂಪದಲ್ಲಿ ತುಂಬಬೇಕು. ಚೆಕ್ಕುಗಳ ಮೂಲಕ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲಾ.

10. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್ ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು.

11. ಸರ್ಕಾರದ ನಿರುಪಯುಕ್ತ ಬಿಡಿಭಾಗ ಹಾಗೂ ಟಾಯರ್ ಟ್ಯೂಬ್‌ಗಳ ಹರಾಜಿನಲ್ಲಿ ಭಾಗವಹಿಸುವ ಟೆಂಡರ್ ಸವಾಲುದಾರರು ಸರ್ಕಾರಿ ನಿಯಮವನ್ನು ಪಾಲಿಸಬೇಕು.

12. ನಿರುಪಯುಕ್ತ ಬಿಡಿಭಾಗ ಹಾಗೂ ಟಾಯರ್ ಟ್ಯೂಬ್‌ಗಳ ತೆರಿಗೆಯನ್ನು ಚಾಲ್ತಿಯಲ್ಲಿರುವ ದರ ನಿಯಮಗಳ ಮೇಲೆ ವಸೂಲು ಮಾಡಲಾಗುವುದು.

13. ಟೆಂಡರ್ ಕವರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಟೆಂಡರ್‌ದಾರರ ತಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರುದಾರರು ಮುಂಗಡವಾಗಿ ಕಟ್ಟಲ್ಪಟ್ಟ ಹಣದಲ್ಲಿ ವಸೂಲಿ ಮಾಡುವ ಅಧಿಕಾರವು ಎಸ್.ಪಿ. ಕಾರವಾರರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ಹಾಗೂ ಅಂತಹ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿ ಮಾಡತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಕ್ರಮ ತೆಗೆದುಕೊಳ್ಳಲಾಗುವುದು.

14. ಹರಾಜಿನಲ್ಲಿ ಯಾವುದೇ ಟೆಂಡರ್ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಎಸ್.ಪಿ. ಕಾರವಾರ ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.

15. ನಿರುಪಯುಕ್ತ ಬಿಡಿಭಾಗ ಹಾಗೂ ಟಾಯರ್ ಟ್ಯೂಬ್‌ಗಳನ್ನು ಈಗ ಇರುವ ಸ್ಥಳದಲ್ಲಿಯೇ ಹರಾಜು ಮಾಡಲಾಗುವುದು.

16. ಇಚ್ಚೆಯುಳ್ಳ ಟೆಂಡರ್ ಸವಾಲುದಾರರು ಹರಾಜು ಮಾಡಲಿರುವ ನಿರುಪಯುಕ್ತ ಬಿಡಿಭಾಗಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ವಾಹನ ವಿಭಾಗ ಕಾರವಾರದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.

ಪಿ.ಆರ್. 192

ಪೊಲೀಸ್ ಅಧೀಕ್ಷಕರು, ಉತ್ತರ ಕನ್ನಡ, ಕಾರವಾರ.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ,

## ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು-560 009

## ಅಧಿಸೂಚನೆ

## ನೇರ ನೇಮಕಾತಿಯ ಜಾಹಿರಾತುಗಳು

**ಸಂಖ್ಯೆ: ಇಎಸ್‌ಟಿ 2-235:2003-04, ದಿನಾಂಕ: 4ನೇ ಮೇ, 2004**

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಜವಾನರ ವೃಂದದಲ್ಲಿ ಕಂಡು ಬಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21.11.2001.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 06 ಸೆನೆನಿ 2001 ದಿನಾಂಕ:13.02.2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ:08.02.2000.
4. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 08 ಸೆನೆನಿ 2001 ದಿನಾಂಕ:13.02.2001.
5. ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:13:ಎಸ್‌ಬಿಸಿ:2001 ದಿನಾಂಕ: 01.06.2002 (ದಿನಾಂಕ: 14.06.2002 ರಂದು ಕರ್ನಾಟಕ ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ.)
6. ಈ ಕಛೇರಿಯ ಅಧಿಸೂಚನೆ ಸಂಖ್ಯೆ:ಇಎಸ್‌ಟಿ 1-275/2001-02 ದಿನಾಂಕ:06.09.2002. (ದಿನಾಂಕ: 19.09.2002 ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.)
7. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 97 ಸೆನೆನಿ 2002 ದಿನಾಂಕ:22.11.2002.
8. ಸರ್ಕಾರದ ಆದೇಶ ಸಂಖ್ಯೆ: ಆಇ 3 ಬಿಇಎಂ 2001 ದಿನಾಂಕ:03.01.2003.
9. ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 74 SRR 2002 ದಿನಾಂಕ: 29.01.2003. (ದಿನಾಂಕ:30.01.2003 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
10. ಸರ್ಕಾರದ ಪತ್ರ ಸಂಖ್ಯೆ: ಕಂಇ 15 ಮುನೋಸ 2003 ದಿನಾಂಕ:30.01.2004.

ಈ ಹಿಂದೆ ಉಲ್ಲೇಖ (6) ರನ್ವಯ ದಿನಾಂಕ:06.09.2002 ರಂದು ಅಧಿಸೂಚನೆ ಹೊರಡಿಸಿ ಜವಾನರ ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿಗಾಗಿ ಅರ್ಜಿಗಳನ್ನು ಕರೆಯಲಾಗಿದ್ದ ಸದರಿ ಅಧಿಸೂಚನೆಯನ್ನು ಉಲ್ಲೇಖ (10)ರ ಸರ್ಕಾರದ ಪತ್ರದಲ್ಲಿನ ನಿರ್ದೇಶನದನ್ವಯ ಈ ಮೂಲಕ ರದ್ದು ಪಡಿಸುತ್ತಾ ಉಲ್ಲೇಖ (1) ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ ವಿಶೇಷ ನೇಮಕಾತಿ) ನಿಯಮಗಳು 2001ರ ನಿಯಮಗಳಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಜವಾನರ ವೃಂದದಲ್ಲಿ ಗುರುತಿಸಲ್ಪಟ್ಟ ಕೆಳಕಂಡ ಬ್ಯಾಕ್‌ಲಾಗ್ ಹುದ್ದೆಗಳ ನೇರ ನೇಮಕಾತಿಗಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅರ್ಹ ಅಭ್ಯರ್ಥಿಗಳಿಂದ ಮಾತ್ರ ನಿಗದಿತ ಅರ್ಜಿ ನಮೂನೆ ಭಾಗ-1ರಲ್ಲಿ ಅರ್ಜಿಗಳನ್ನು ದ್ವಿಪ್ರತಿಯಲ್ಲಿ ಕರೆಯಲಾಗಿದೆ.

**ಟಿಪ್ಪಣಿ:** ಈ ಅಧಿಸೂಚನೆಯಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಪ್ರಸಂಗಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

**ಅಭ್ಯರ್ಥಿಗಳಿಗೆ ವಿಶೇಷ ಸೂಚನೆ:**

1. (i) ಈ ಹಿಂದೆ ದಿನಾಂಕ:06.09.2002ರಂದು ಉಲ್ಲೇಖ (6)ರನ್ವಯ ಅಧಿಸೂಚನೆ ಹೊರಡಿಸಿ ಜವಾನರ ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿಗಾಗಿ ಅರ್ಜಿಗಳನ್ನು ಕರೆಯಲಾಗಿದ್ದು, ಸದರಿ ಅಧಿಸೂಚನೆಯನ್ನು ಈ ಮೂಲಕ ರದ್ದುಪಡಿಸಿರುವುದರಿಂದ ದಿನಾಂಕ:06.09.2002ರ ಉಲ್ಲೇಖ (6)ರ ಸದರಿ ಅಧಿಸೂಚನೆಗೆ ಅನುಗುಣವಾಗಿ ಈ ಹಿಂದೆ ಜವಾನರ ಬ್ಯಾಕ್‌ಲಾಗ್ ಹುದ್ದೆಗಳ ಆಯ್ಕೆಗಾಗಿ ಅಭ್ಯರ್ಥಿಗಳು ಈ ಹಿಂದೆ ಸಲ್ಲಿಸಿರುವ ಯಾವುದೇ ಅರ್ಜಿಗಳನ್ನು ಈಗ ಪರಿಗಣಿಸಲಾಗುವುದಿಲ್ಲ.

   ಆದ್ದರಿಂದ ಈ ಹಿಂದೆ ಜವಾನರ ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಎಲ್ಲಾ ಅಭ್ಯರ್ಥಿಗಳೂ ಈಗ ಹೊರಡಿಸಿರುವ ಈ ಅಧಿಸೂಚನೆಯಲ್ಲಿ ಹೇಳಿರುವ ಷರತ್ತುಗಳ ಪ್ರಕಾರ ಜವಾನರ ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿಗಾಗಿ ಮತ್ತೊಮ್ಮೆ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸತಕ್ಕದ್ದೆಂದು ಈ ಮೂಲಕ ತಿಳಿಯಪಡಿಸಿದೆ.
2. (ii) ನಿಗದಿಪಡಿಸಿದ ಅರ್ಜಿ ನಮೂನೆ ಭಾಗ-1ಅನ್ನು ಸರ್ಕಾರಿ ಪುಸ್ತಕ ಮಳಿಗೆ ಅಥವಾ ಅಧಿಕೃತವಾಗಿ ಪಠ್ಯ ಪುಸ್ತಕಗಳನ್ನು ಮಾರಾಟ ಮಾಡುವವರಿಂದ ನಿಗದಿಪಡಿಸಿದ ಶುಲ್ಕವನ್ನು ಪಾವತಿ ಮಾಡಿ ಖರೀದಿಸಬೇಕು.
3. ಬೆರಳಚ್ಚು ಮಾಡಿದ ಅರ್ಜಿ ನಮೂನೆಗಳನ್ನು ಅಥವಾ ಜೆರಾಕ್ಸ್ ಮಾಡಿದ ಅರ್ಜಿ ನಮೂನೆಗಳನ್ನು ಅಥವಾ ಕೈ ಬರಹದಿಂದ ಬರೆದ ಅರ್ಜಿ ನಮೂನೆಗಳನ್ನು ಅಥವಾ ಇತರೆ ಯಾವುದೇ ನಮೂನೆಯಲ್ಲಿರುವ ಅರ್ಜಿಗಳನ್ನು ಅಂಗೀಕರಿಸಲಾಗುವುದಿಲ್ಲ.
4. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:**19.06.2004.**
5. ಭರ್ತಿ ಮಾಡಿದ ಅರ್ಜಿ ನಮೂನೆ ಭಾಗ-1 ಅನ್ನು ಅಡಕಗಳೊಂದಿಗೆ ಸಲ್ಲಿಸುವ ವಿಳಾಸ:

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು-560 009.**

6. **ವಿದ್ಯಾರ್ಹತೆ:** ಕನ್ನಡ ಒಂದು ವಿಷಯವಾಗಿದ್ದು ಸಾರ್ವಜನಿಕ ಶಿಕ್ಷಣ ಇಲಾಖೆಯವರು ನಡೆಸುವ ಏಳನೇ ತರಗತಿಯಲ್ಲಿ ತೇರ್ಗಡೆಯಾಗಿರಬೇಕು.
7. **ವೇತನ ಶ್ರೇಣಿ:** ರೂ. 2500-50-2700-75-3450-100-3850
8. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಅರ್ಜಿಯನ್ನು ಒಳಗೊಂಡಿರುವ ಲಕೋಟೆಯ ಮೇಲೆ **"ಬ್ಯಾಕ್‌ಲಾಗ್ ಜವಾನರ ಹುದ್ದೆಗಾಗಿ ಅರ್ಜಿ"** ಎಂದು ಸ್ಪಷ್ಟವಾಗಿ ನಮೂದಿಸಿರಬೇಕು.
9. ಅರ್ಜಿಗಳನ್ನು ಅಂಚೆಯ ಮೂಲಕ ಕಳುಹಿಸಲಾಗುವುದಿಲ್ಲ.
10. **ವಯೋಮಿತಿ:** ಅರ್ಜಿಯನ್ನು ಸ್ವೀಕರಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಗಳು 18 ವರ್ಷಕ್ಕೆ ಮೀರಿರಬೇಕು ಮತ್ತು ಅಭ್ಯರ್ಥಿಗಳು ಗರಿಷ್ಟ 40 ವರ್ಷ ವಯೋಮಿತಿ ಒಳಗಿರಬೇಕು.
11. **ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ಹೇಳಿದಂತೆ ಸಂದರ್ಭಾನುಸಾರ ಸಡಿಲಿಸಲಾಗುವುದು.**
    (ಅ) ಅಭ್ಯರ್ಥಿಯು ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ಸರ್ಕಾರ ಅಥವಾ ಸರ್ಕಾರವು ನಿರ್ದಿಷ್ಟ ಪಡಿಸಿದ ಯಾವುದೇ ಇತರೆ ಪ್ರಾಧಿಕಾರದ ಸ್ವಾಮ್ಯ ಅಥವಾ ನಿಯಂತ್ರಣಕ್ಕೊಳಪಟ್ಟ ನಿಗಮದಲ್ಲಿ, ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಯಾವುದೇ ಹುದ್ದೆಯಲ್ಲಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು: ಅವಳು ಅಂತಹ ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ಅಥವಾ ಈ ಹಿಂದೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸಿದಷ್ಟು ವರ್ಷಗಳು ಅಥವಾ ಹತ್ತು ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
    (ಆ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.
    (ಇ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ಕೇಂದ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
    (ಈ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು.

**ಟಿಪ್ಪಣಿ:**

(i) ಮೇಲೆ ತಿಳಿಸಿರುವ 11ನೇ ಕಂಡಿಕೆಯಲ್ಲಿರುವ (ಅ) ಮತ್ತು (ಇ) ಉಪ ಕಂಡಿಕೆಗಳ ಮೇರೆಗೆ ಗರಿಷ್ಟ ವಯೋಮಿತಿಯ ಸೌಲಭ್ಯ ಕೋರುವ ಅಭ್ಯರ್ಥಿಗಳು ಅವರು ಸಲ್ಲಿಸಿದ್ದ ಅಥವಾ ಸಲ್ಲಿಸಿರುವ ಸೇವೆಯ ಬಗೆಗಿನ ಪ್ರಮಾಣ ಪತ್ರವನ್ನು ದ್ವಿಪ್ರತಿಯಲ್ಲಿ ಲಗತ್ತಿಸಬೇಕು. ಇಲ್ಲದಿದ್ದರೆ ಅವರ ಹಕ್ಕು ಕೋರಿಕೆಯನ್ನು ಪರಿಗಣಿಸಲಾಗುವುದಿಲ್ಲ.

(ii) ಕಂಡಿಕೆ 11 ರಲ್ಲಿರುವ ಉಪ ಕಂಡಿಕೆ (ಅ) ಮೇರೆಗೆ ಗರಿಷ್ಟ ವಯೋಮಿತಿಯ ಸೌಲಭ್ಯ ಕೋರುವ ಅಭ್ಯರ್ಥಿಯು ಅವಳು ವಿಧವೆಯೆಂಬ ಬಗ್ಗೆ ತಹಶೀಲ್ದಾರರ ದರ್ಜೆಗೆ ಕಡಿಮೆಯಿಲ್ಲದ ಕಂದಾಯ ಅಧಿಕಾರಿಯಿಂದ ಪಡೆದ ಪ್ರಮಾಣ ಪತ್ರವನ್ನು ದ್ವಿಪ್ರತಿಯಲ್ಲಿ ಅರ್ಜಿಯೊಂದಿಗೆ ಲಗತ್ತಿಸಬೇಕು. ಹಾಗೂ

(iii) ಮರು ವಿವಾಹವಾಗದಿರುವ ಬಗ್ಗೆ ತಹಶೀಲ್ದಾರ್ ರಿಂದ ಪಡೆದ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.

(iv) **ಅಂಗವಿಕಲ ಅಭ್ಯರ್ಥಿಗಳಿಗೆ ಸೂಚನೆಗಳು:**
ಅಂಗವಿಕಲ ಅಭ್ಯರ್ಥಿಗಳು ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 7 ಸೇಸ್ಥಅ 94 ದಿನಾಂಕ: 13.09.95 ರನ್ವಯ ವೈದ್ಯಕೀಯ ಪ್ರಮಾಣ ಪತ್ರ ನಮೂನೆ (ಎ) ಮತ್ತು (ಬಿ)ದಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾಮಟ್ಟದ ಅಥವಾ ತಾಲ್ಲೂಕು ಮಟ್ಟದ ಸರ್ಕಾರಿ ವೈದ್ಯರು ನೀಡುವ ಪ್ರಮಾಣ ಪತ್ರವನ್ನು ಪಡೆದು ಅದರ ಎರಡು ಪ್ರತಿಗಳನ್ನು ಅರ್ಜಿಗೆ ಲಗತ್ತಿಸಬೇಕು (ಅಭ್ಯರ್ಥಿಗಳ ಮಾಹಿತಿಗಾಗಿ ನಮೂನೆ (ಎ) ಮತ್ತು (ಬಿ) ಯನ್ನು ಈ ಅಧಿಸೂಚನೆಯಲ್ಲಿ ಮುದ್ರಿಸಲಾಗಿದೆ.)

(v) ರಾಜ್ಯದ ಸರ್ಕಾರಿ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಯಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡುವ ಅಧಿಕಾರ ಹೊಂದಿದವರಾಗಿರುತ್ತಾರೆ.

(vi) ದೈಹಿಕ ಅಂಗವಿಕಲತೆಗೆ ಒಳಪಡುವ ಅಭ್ಯರ್ಥಿಗಳು ಮೂಳೆ ತಜ್ಞ (Orthopedic Surgeon) ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು (Limco Kanpur (W.H.O. Standard) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ.

12. **ವಿಶೇಷ ಸೂಚನೆಗಳು:**
    ಎ) ಅರ್ಜಿ ನಮೂನೆ ಭಾಗ-1 ಅನ್ನು ಭರ್ತಿ ಮಾಡಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
    ಬಿ) ಅರ್ಜಿ ನಮೂನೆ ಭಾಗ-1ರಲ್ಲಿರುವ ಕಾಲಂ ನಂಬರ್ -12 ಅನ್ನು ಅಭ್ಯರ್ಥಿಗಳು ಭರ್ತಿ ಮಾಡುವ ಅವಶ್ಯಕತೆ ಇರುವುದಿಲ್ಲ.
13. **ಸೂಚನೆಗಳು:**

ಅರ್ಜಿ ನಮೂನೆ ಭಾಗ-1 ಅನ್ನು ದ್ವಿಪ್ರತಿಯಲ್ಲಿ ಸಲ್ಲಿಸುವಾಗ ಈ ಕೆಳಕಂಡ ಪ್ರಮಾಣ ಪತ್ರಗಳ ಪ್ರತಿಗಳನ್ನು ಸ್ವಯಂ ದೃಢೀಕರಿಸಿ ದ್ವಿಪ್ರತಿಯಲ್ಲಿ ಸಲ್ಲಿಸಬೇಕು.

ಎ) ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ: SWD 132, SAD 97, ದಿನಾಂಕ:08.02.2000ದಲ್ಲಿ ನಿಗದಿ ಪಡಿಸಿರುವ ಡಿ- ನಮೂನೆಯಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪಡೆದ ಜಾತಿ ಪ್ರಮಾಣ ಪತ್ರದ ಪ್ರತಿ (ಅಭ್ಯರ್ಥಿಗಳ ಮಾಹಿತಿಗಾಗಿ ನಮೂನೆ-ಡಿ ಯನ್ನು ಈ ಅಧಿಸೂಚನೆಯಲ್ಲಿ ಮುದ್ರಿಸಲಾಗಿದೆ).

ಬಿ) ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯ ಶೈಕ್ಷಣಿಕ ಪ್ರಮಾಣ ಪತ್ರದ ಪ್ರತಿ ಅಂದರೆ ಅಭ್ಯರ್ಥಿಯು ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರುವ ಬಗ್ಗೆ ಏಳನೇ ತರಗತಿಯ ಅಂಕಪಟ್ಟಿಯ ಪ್ರತಿಯನ್ನು ಲಗತ್ತಿಸತಕ್ಕದ್ದು.

ಸಿ) ಹುಟ್ಟಿದ ತಾರೀಖನ್ನು ನಮೂದಿಸಿರುವ ಶಾಲೆಯ ವರ್ಗಾವಣೆ ಪ್ರಮಾಣ ಪತ್ರದ ಪ್ರತಿ ಅಥವಾ ಹುಟ್ಟಿದ ದಿನಾಂಕವಿರುವ ಇನ್ನಾವುದೇ ಅಧಿಕೃತ ದಾಖಲೆಯ ಪ್ರತಿ.

ಡಿ) ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ನೀಡಲ್ಪಟ್ಟ ಇತ್ತೀಚಿನ ನಡತೆಯ ಪ್ರಮಾಣ ಪತ್ರದ ಪ್ರತಿಗಳು.

ಇ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅಂತಹವರು ಸೈನಿಕ ಸೇವೆಯಿಂದ ಬಿಡುಗಡೆಯಾದ/ ಮುಕ್ತಿ ಹೊಂದಿದ ಬಗ್ಗೆ ಪ್ರಮಾಣ ಪತ್ರದ ಪ್ರತಿಯನ್ನು ಲಗತ್ತಿಸತಕ್ಕದ್ದು.

ಎಫ್) ಹಿಂದಿನ ಮತ್ತು ಈಗಿನ ಉದ್ಯೋಗಕ್ಕೆ ಸಂಬಂಧಿಸಿದ ಸೇವಾ ಪ್ರಮಾಣ ಪತ್ರದ ಪ್ರತಿ (ಕೇಂದ್ರ ಅಥವಾ ರಾಜ್ಯ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.)

14. **ಗ್ರಾಮೀಣ ಅಭ್ಯರ್ಥಿ:**

ಎ) ಗ್ರಾಮೀಣ ಮೀಸಲಾತಿ ಸೌಲಭ್ಯ ಪಡೆಯಲಿಚ್ಛಿಸುವ ಗ್ರಾಮೀಣ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸೆನೆನಿ 2001 ದಿನಾಂಕ: 13.02.2001ರಲ್ಲಿ ವಿವರಿಸಿರುವಂತೆ ಅಭ್ಯರ್ಥಿಗಳು ಅವರ ವ್ಯಾಸಂಗಕ್ಕೆ ಸಂಬಂಧಿಸಿದಂತೆ ಗ್ರಾಮಾಂತರ ಪ್ರದೇಶದಲ್ಲಿ ಒಂದನೇ ತರಗತಿಯಿಂದ ಏಳನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿರುವ ಬಗ್ಗೆ ಅಭ್ಯರ್ಥಿಗಳು ಉತ್ತೀರ್ಣರಾದ ಶಾಲೆಯ ಮುಖ್ಯೋಪಾಧ್ಯಾಯರು/ ಮುಖ್ಯೋಪಾಧ್ಯಾಯಿನಿಯರಿಂದ ಕ್ಷೇತ್ರ ಶಿಕ್ಷಣಾಧಿಕಾರಿಯ ಮೇಲು ಸಹಿಯೊಂದಿಗೆ ನಮೂನೆ-2ರಲ್ಲಿ ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಸ್ವಯಂ ದೃಢೀಕರಿಸಿ ಅರ್ಜಿಯ ಜೊತೆ ಲಗತ್ತಿಸಬೇಕು. (ಅಭ್ಯರ್ಥಿಗಳ ಮಾಹಿತಿಗಾಗಿ ನಮೂನೆ-2ರ ಪ್ರಮಾಣ ಪತ್ರವನ್ನು ಈ ಅಧಿಸೂಚನೆಯಲ್ಲಿ ಮುದ್ರಿಸಲಾಗಿದೆ).

ಬಿ) ಗ್ರಾಮೀಣ ಮೀಸಲಾತಿ ಬಗ್ಗೆ ಗ್ರಾಮೀಣ ಅಭ್ಯರ್ಥಿಗಳು ಹಳೆಯ ನಮೂನೆಗಳಲ್ಲಿ ಪ್ರಮಾಣ ಪತ್ರಗಳನ್ನು ಸಲ್ಲಿಸಿದರೆ ಅಂತಹವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

15. **ಯೋಜನಾ ಅಭ್ಯರ್ಥಿ:**

ಯೋಜನೆಗಳಿಂದ ನಿರಾಶ್ರಿತಗೊಂಡ ಬಗ್ಗೆ ಮೀಸಲಾತಿಯನ್ನು (ಯೋಜನಾ ಅಭ್ಯರ್ಥಿಯ ಮೀಸಲಾತಿ) ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 44 ಸೇನನಿ 2001 ದಿನಾಂಕ: 27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಸಕ್ಷಮ ಪ್ರಾಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದು ಅದರ ಸ್ವಯಂ ದೃಢೀಕೃತ ಪ್ರತಿಗಳನ್ನು ಲಗತ್ತಿಸಬೇಕು. (ಈ ಸಂಬಂಧದ ನಮೂನೆಯನ್ನು ಮಾಹಿತಿಗಾಗಿ ಈ ಅಧಿಸೂಚನೆಯಲ್ಲಿ ಮುದ್ರಿಸಲಾಗಿದೆ)

16. **ಅಂಗವಿಕಲ ಅಭ್ಯರ್ಥಿ:**

ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 7 ಸೇಸ್ಥಅ 94 ದಿನಾಂಕ:13.09.95 ರಲ್ಲಿ ನಿಗದಿಪಡಿಸಲಾದ ವೈದ್ಯಕೀಯ ಪ್ರಮಾಣ ಪತ್ರವನ್ನು ನಮೂನೆ (ಎ) ಮತ್ತು (ಬಿ) ಯಲ್ಲಿ ಸಂಬಂಧಿಸಿದವರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. (ಅಭ್ಯರ್ಥಿಯ ಮಾಹಿತಿಗಾಗಿ ನಮೂನೆ (ಎ) ಮತ್ತು (ಬಿ) ಯನ್ನು ಈ ಅಧಿಸೂಚನೆಯಲ್ಲಿ ಮುದ್ರಿಸಲಾಗಿದೆ.)

17. ಎ) ಪ್ರಮಾಣ ಪತ್ರಗಳನ್ನು ಲಗತ್ತಿಸದಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಬಿ) ನಿಗದಿತ ನಮೂನೆಯಲ್ಲಿಲ್ಲದ ಮತ್ತು ಅಪೂರ್ಣ ಮಾಹಿತಿ ಇರುವ ಅರ್ಜಿಗಳನ್ನು ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸಿ) ಅಭ್ಯರ್ಥಿಗಳ ಆಯ್ಕೆಯ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅಂತಹವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಡಿ) ತಪ್ಪು ಮಾಹಿತಿ ಒದಗಿಸುವ ಅಭ್ಯರ್ಥಿಗಳು ಆಯ್ಕೆಗೆ ಅರ್ಹರಾಗಿರುವುದಿಲ್ಲ. ಹಾಗೂ ಅಂತಹವರ ವಿರುದ್ಧ ಕ್ರಿಮಿನಲ್ ಕ್ರಮ ಜರುಗಿಸಲಾಗುವುದು.

ಇ) ಅರ್ಜಿದಾರರೊಡನೆ ಪತ್ರ ವ್ಯವಹಾರಗಳಿಗೆ ಅವಕಾಶವಿರುವುದಿಲ್ಲ.

ಎಫ್) ಅಂಚೆ ಮೂಲಕ, Speed Post ಮೂಲಕ ಮತ್ತು ಕೊರಿಯರ್ ಮೂಲಕ ಅರ್ಜಿಗಳನ್ನು ಸಲ್ಲಿಸುವವರು ಅರ್ಜಿಗಳನ್ನು ನಿಗದಿತ ದಿನಾಂಕದೊಳಗೆ ತಲುಪುವಂತೆ ಕಳುಹಿಸಬೇಕು. ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

18. ಎ) ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಮೊದಲು ತಮ್ಮ ಇಲಾಖಾ ಮುಖ್ಯಸ್ಥರಿಂದ ಅನುಮತಿ ಪಡೆದು ಕಛೇರಿ ಮೂಲಕ ಅರ್ಜಿಗಳನ್ನು ನಿಗದಿತ ದಿನಾಂಕದೊಳಗೆ ತಲುಪುವಂತೆ ಕಳುಹಿಸಬೇಕು ಹಾಗೂ

ಬಿ) ಅಭ್ಯರ್ಥಿಗಳು ಈ ಹುದ್ದೆಗಾಗಿ ಅರ್ಜಿ ಸಲ್ಲಿಸುವ ಸಮಯದಲ್ಲಿ ಅಗತ್ಯವಾಗಿ ಸಲ್ಲಿಸಬೇಕಾದ ಎಲ್ಲಾ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸಿ ದ್ವಿಪ್ರತಿಗಳಲ್ಲಿ ಅರ್ಜಿಯೊಂದಿಗೆ ತಪ್ಪದೇ ಲಗತ್ತಿಸಬೇಕು ಹಾಗೆ ಮಾಡಲು ತಪ್ಪಿದಲ್ಲಿ ಅಂತಹ ಅರ್ಜಿಗಳನ್ನು ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

19. **ನೇಮಕಾತಿ ವಿಧಾನ:**

ಅಭ್ಯರ್ಥಿಗಳ ಆಯ್ಕೆಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001ರಲ್ಲಿ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ ವಿಶೇಷ ನೇಮಕಾತಿ) ನಿಯಮಗಳು 2001 ರನ್ವಯ ಮತ್ತು ಉಲ್ಲೇಖ (9)ರ ಸರ್ಕಾರದ ಅಧಿಸೂಚನೆ ಅನ್ವಯ ಜವಾನರ ಹುದ್ದೆಗೆ ನಿಗದಿಪಡಿಸಲಾದ ಏಳನೇ ತರಗತಿ ಪರೀಕ್ಷೆಯಲ್ಲಿ ಪಡೆದ ಶೇಕಡಾವಾರು ಅಂಕಗಳ ಆಧಾರದ ಮೇರೆಗೆ ಮಾಡಲಾಗುವುದು.

20. ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕದ ಯಾವುದೇ ಭಾಗದಲ್ಲಾದರೂ ಕೆಲಸ ಮಾಡಲು ಸಿದ್ದರಾಗಿರಬೇಕು.

21. ಅಭ್ಯರ್ಥಿಯ ಹೆಸರು, ಅಂಕಪಟ್ಟಿಯಲ್ಲಿನ ಹೆಸರು ಮತ್ತು ಅರ್ಜಿ ನಮೂನೆಯಲ್ಲಿನ ಹೆಸರು ಒಂದೇ ಆಗಿರಬೇಕು. ಬದಲಾವಣೆಯಾಗಿದ್ದಲ್ಲಿ ಸೂಕ್ತ ದಾಖಲಾತಿಗಳನ್ನು ಲಗತ್ತಿಸತಕ್ಕದ್ದು.

22. ಎ) **ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಜವಾನರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ವಿವರ:**

(i) ಪರಿಶಿಷ್ಟ ಜಾತಿ- ಹತ್ತೊಂಭತ್ತು (ii) ಪರಿಶಿಷ್ಟ ಪಂಗಡ - ಹದಿನೇಳು.

ಬಿ) ಸದರಿ ಹುದ್ದೆಗಳ ವರ್ಗೀಕರಣ ವಿವರ:

| ಕ್ರ. ಸಂ. | ಮೀಸಲಾತಿ ವಿವರಗಳು | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|---|
| 1 | 2 | 3 | 4 |
| 1. | ಸಾಮಾನ್ಯ ಅರ್ಹತಾ ಅಭ್ಯರ್ಥಿ | 4 | 4 |
| 2. | ಮಹಿಳಾ ಅಭ್ಯರ್ಥಿ | 6 | 5 |
| 3. | ಗ್ರಾಮೀಣ ಅಭ್ಯರ್ಥಿ | 5 | 5 |
| 4. | ಮಾಜಿ ಸೈನಿಕ | 1 | 1 |
| 5. | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ | 1 | 1 |
| 6. | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | 1 | 1 |
| 7. | ಅಂಗವಿಕಲ ಅಭ್ಯರ್ಥಿ | 1 | ಇಲ್ಲ |
| | **ಒಟ್ಟು** | **19** | **17** |

23. ಮೇಲೆ ವಿವರಿಸಿದ ಹುದ್ದೆಗಳು ಕೆಳಕಂಡ ಜಿಲ್ಲೆಗಳಿಗೆ ಸೇರಿದವುಗಳಾಗಿರುತ್ತವೆ.

| ಕ್ರ. ಸಂ. | ಜಿಲ್ಲೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
|---|---|---|---|---|
| 1 | 2 | 3 | 4 | 5 |
| 1. | ಬೆಂಗಳೂರು | 4 | 2 | 6 |
| 2. | ಬಳ್ಳಾರಿ | 1 | - | 1 |
| 3. | ಬಾಗಲಕೋಟೆ | 2 | 1 | 3 |
| 4. | ಚಿಕ್ಕಮಗಳೂರು | 1 | 1 | 2 |
| 5. | ಚಿತ್ರದುರ್ಗ | - | 2 | 2 |
| 6. | ಚಾಮರಾಜನಗರ | 1 | - | 1 |
| 7. | ಧಾರವಾಡ | 1 | - | 1 |
| 8. | ಗದಗ | 1 | 1 | 2 |
| 9. | ಹಾಸನ | 1 | 1 | 2 |
| 10. | ಹಾವೇರಿ | 1 | 1 | 2 |
| 11. | ಕೋಲಾರ | 1 | - | 1 |
| 12. | ಕೊಪ್ಪಳ | 1 | 1 | 2 |
| 13. | ಕೊಡಗು | - | 1 | 1 |
| 14. | ಮಂಡ್ಯ | - | 2 | 2 |
| 15. | ರಾಯಚೂರು | - | 1 | 1 |
| 16. | ಶಿವಮೊಗ್ಗ | 2 | 1 | 3 |
| 17. | ಉಡುಪಿ | - | 1 | 1 |

